ರಾಮಕೃಷ್ಣ ಮಹಾಸಂಘದ ಕನ್ನಡ ಮಾಸಪತ್ರಿಕೆ




# ವಿವೇಕಪ್ರಭ

ಪರಿಪೂರ್ಣ ಜೀವನದ ಪರಮಾಪ್ತ ಪತ್ರಿಕೆ

₹ 14

ಏಪ್ರಿಲ್-2016

# PACKAGE TOURS

**Hotel Room Accom. & South Indian Veg. Food**

## CHARODHAM - KASHI - GAYA : 19/26 DAYS

June 06 Aug 30, Sep 06, 18 Oct 03

Haridwar, Yamunotri, Gangotri, Uttarkashi, Kedar, Triyugi (Optional), Mana, Vyasa Guha, Ganesh Guha, Keshava Prayag, Badari, Rishikesh, New Delhi, Allahabad, Ayodhya, Saranath, Gaya, Bodhgaya, Kashi

## HOLY AMARNATH & VAISHNAVI DEVI : 19 DAYS

June 28

Attari Border [Indo-Pak Border], Amritsar, Jammu, Baltal, Amarnath, Gulmarg, Srinagar (Kashmir), Vaishnavi Devi, Kurukshetra, New Delhi

## SHAKTIPEETHA MANALI SPECIAL : 18 DAYS

Sep 18

Attari Border [Indo-Pak Border], Amritsar, Chandigarh, Shimla, Kufri, Kullu, Manali, Rohtang Pass (Optional), Vashishta, Baijnath, Chamunda, Naina Devi, Kangra, Chintpurni, Jwalamukhi, Vaishnavi Devi, Kurukshetra, New Delhi

## KASHI - NEPAL : 16 DAYS

Sep 11

Kashi, Kathmandu, Pokhara, Mukthinath (Optional), Manokamana, Gorakhpur



ಏಪ್ರಿಲ್-2016 ಸಂಪುಟ 17 ಸಂಚಿಕೆ 04



# ವಿವೇಕ ಪ್ರಭ

 ಪರಿವಿಡಿ 






















**ವ್ಯವಸ್ಥಾಪಕ ಸಂಪಾದಕರು**
*ಸ್ವಾಮಿ ಮುಕ್ತಿದಾನಂದ*

**ಸಂಪಾದಕರು**
*ಸ್ವಾಮಿ ಜ್ಞಾನಯೋಗಾನಂದ*

**ನೆರವು:**
*ಆರ್. ಎಸ್. ಪೂರ್ಣಾನಂದ*
*ಡಾ. ಕೆ. ಎಲ್. ಪ್ರಸನ್ನಾಕ್ಷಿ*
*ಡಾ. ಎಚ್. ಪಾಂಡುರಂಗ ವಿಠಲ*

**ಅಕ್ಷರ ಜೋಡಣೆ**
*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*
**ಮುದ್ರಣ**
*ಮಯೂರ್ ಗ್ರಾಫಿಕ್ಸ್, ಬೆಂಗಳೂರು*



E-mail:
mysuru.vivekaprabha@rkmm.org
Website: www.vivekaprabha.net
ಫೋನ್ : 9481533505


**ಮುಖಪುಟ:**

ಮಾವಿನ ಹೂವಿನ ಮಧುವನವೀ ನೆಲ!

**ಈ ಪತ್ರಿಕೆಯ ಧ್ಯೇಯ**

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ


**ಚಂದಾ ವಿವರ**

ಬಿಡಿ ಪ್ರತಿ : ₹ 14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ) : ₹ 3,000
ಪೋಷಕರು : ₹ 5,000 ಅಥವಾ ಹೆಚ್ಚು.
ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ) : $ 300
ಪೋಷಕರು : $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

# ಶ್ರೀ ಪಾಂಡುರಂಗಾಷ್ಟಕಮ್ - ೧



**ಮಹಾಯೋಗಪೀಠೇ ತಟೇ ಭೀಮರಥ್ಯಾ**
**ವರಂ ಪುಂಡರೀಕಾಯ ದಾತುಂ ಮುನೀಂದ್ರೈಃ ।**
**ಸಮಾಗತ್ಯ ತಿಷ್ಠಂತಮಾನಂದಕಂದಂ**
**ಪರಬ್ರಹ್ಮಲಿಂಗಂ ಭಜೇ ಪಾಂಡುರಂಗಂ ॥ ೧ ॥**

ಭೀಮರಥೀ ತೀರದಲ್ಲಿ ಮಹಾಯೋಗ ಪೀಠದಲ್ಲಿ ಭಕ್ತಶ್ರೇಷ್ಠ ಪುಂಡರೀಕನಿಗೆ ವರವನ್ನು ಕೊಡಲು ಮುನಿಶ್ರೇಷ್ಠರೊಂದಿಗೆ ಬಂದು ನಿಂತಿರುವ ಆನಂದಮಯ ಪರಬ್ರಹ್ಮಸ್ವರೂಪಿ ಪಾಂಡುರಂಗನನ್ನು ಭಜಿಸುವೆನು.

**ತಡಿದ್ವಾಸಸಂ ನೀಲಮೇಘಾವಭಾಸಂ**
**ರಮಾಮಂದಿರಂ ಸುಂದರಂ ಚಿತ್ಪ್ರಕಾಶಮ್ ।**
**ವರಂ ತ್ವಿಷ್ಟಕಾಯಾಂ ಸಮನ್ಯಸ್ತ ಪಾದಂ**
**ಪರಬ್ರಹ್ಮ ಲಿಂಗಂ ಭಜೇ ಪಾಂಡುರಂಗಮ್ ॥ ೨ ॥**

ವಿದ್ಯುಲ್ಲತೆಯಂತೆ ಹೊಳೆಯುವ ಪೀತಾಂಬರವನ್ನು ಧರಿಸಿದ, ಶರೀರದ ನೀಲವರ್ಣದ ಕಾಂತಿಯ, ಲಕ್ಷ್ಮಿಗೆ ಆಶ್ರಯಸ್ಥಾನವಾದ, ಸುಂದರನಾದ, ಚಿತ್‌ಸ್ವರೂಪನಾದ, ಭಕ್ತರಿಗೆ ವರಗಳನ್ನೀಯಲು ಶ್ರೇಷ್ಠರೂಪ ಧರಿಸಿ ಇಟ್ಟಿಗೆಯ ಮೇಲೆ ಸಮವಾಗಿ ಪಾದಗಳನ್ನಿರಿಸಿದ ಪರಬ್ರಹ್ಮ ಸ್ವರೂಪಿ ಪಾಂಡುರಂಗನನ್ನು ಭಜಿಸುವೆನು.

**ಪ್ರಮಾಣಂ ಭವಾಬ್ಧೇರಿದಂ ಮಾಮಕಾನಾಂ**
**ನಿತಂಬಃ ಕರಾಭ್ಯಾಂ ಧೃತೋ ಯೇನ ತಸ್ಮಾತ್ ।**
**ವಿಧಾತುರ್ವಸತ್ಯೈ ಧೃತೋ ನಾಭಿಕೋಶಃ**
**ಪರಬ್ರಹ್ಮಲಿಂಗಂ ಭಜೇ ಪಾಂಡುರಂಗಮ್ ॥ ೩ ॥**

'ನನಗೆ ಶರಣು ಬಂದವರಿಗೆ ಪ್ರಪಂಚದ ಪ್ರಮಾಣವು ಇಷ್ಟೇ' - ಎಂದು ತೋರಲು ಯಾರು ಸೊಂಟದ ಮೇಲೆ ಕೈ ಇಟ್ಟಿರುವನೋ, ಬ್ರಹ್ಮನ ವಸತಿ ಸ್ಥಾನವನ್ನು ತನ್ನ ನಾಭಿಯಲ್ಲಿರಿಸಿದ, ಆನಂದಮಯನಾದ ಆ ಪರಬ್ರಹ್ಮರೂಪಿ ಪಾಂಡುರಂಗನನ್ನು ಭಜಿಸುವೆನು.

**ಸ್ಫುರತ್ಕೌಸ್ತುಭಾಲಂಕೃತಂ ಕಂಠದೇಶೇ**
**ಶ್ರಿಯಾ ಜುಷ್ಟಕೇಯೂರಕಂ ಶ್ರೀನಿವಾಸಮ್ ।**
**ಶಿವಂ ಶಾಂತಮೀಡ್ಯಂ ವರಂ ಲೋಕಪಾಲಂ**
**ಪರಬ್ರಹ್ಮಲಿಂಗಂ ಭಜೇ ಪಾಂಡುರಂಗಂ ॥ ೪ ॥**

ಕೊರಳಲ್ಲಿ ಕೌಸ್ತುಭಮಣಿಯನ್ನು ಧರಿಸಿ ಶೋಭಿಸುತ್ತಿರುವ, ಲಕ್ಷ್ಮೀಸಹಿತನಾದ, ಕೇಯೂರಕ (ಬಾಹುಪುರಿಯನ್ನು) ಧರಿಸಿದ ಶ್ರೀನಿವಾಸನನ್ನು, ಮಂಗಲಮಯ ಸ್ವರೂಪನನ್ನು, ಶಾಂತನನ್ನು, ಭಕ್ತರಿಂದ ಸ್ತುತಿಸಲ್ಪಡುವ, ಶ್ರೇಷ್ಠನನ್ನು, ಲೋಕಸಂರಕ್ಷಕನನ್ನು, ಪರಬ್ರಹ್ಮರೂಪಿ ಪಾಂಡುರಂಗನನ್ನು ಭಜಿಸುವೆನು.



ಸತ್ಯವನ್ನು ನುಡಿದೆಯಾದರೆ,
ಅನಂತರ ನೀನೇನನ್ನೂ
ನೆನಪಿಸಿಕೊಳ್ಳಬೇಕಾಗಿಲ್ಲ.

*- ಮಾರ್ಕ್ ಟ್ವೇನ್*



ಭಯ ಸಮೀಪಿಸುತ್ತಿದೆ
ಎನ್ನುವಾಗಲೇ ಅದನ್ನು
ಆಕ್ರಮಿಸಬೇಕು ಹಾಗೂ
ಅದನ್ನು ನಾಶ ಮಾಡಬೇಕು.

*-ಚಾಣಕ್ಯ*





ನಾಳೆ ಬರುವುದು ನಮಗಿಂದೆ ಬರಲಿ
ಇಂದು ಬರುವುದು ನಮಗೀಗಲೆ ಬರಲಿ
ಆಗೀಗ ಎನ್ನದಿರು ಚೆನ್ನಮಲ್ಲಿಕಾರ್ಜುನ!

*- ಅಕ್ಕಮಹಾದೇವಿ*

ಜಗತ್ತಿನ ಅತಿಸುಂದರ ಹಾಗೂ
ಅತ್ಯುತ್ತಮ ಸಂಗತಿಗಳನ್ನು
ಕಾಣಲಾಗದು,
ಸ್ಪರ್ಶಿಸಲಾಗದು. ಅದನ್ನು
ಕೇವಲ ಹೃದಯದಿಂದ
ಮಾತ್ರ ಭಾವಿಸಿಕೊಳ್ಳಬೇಕು.

*- ಹೆಲೆನ್ ಕೆಲರ್*



ಮಾರ್ಗವನ್ನು ಅನುಸರಿಸುವುದೆಂದರೆ ಗುರುವನ್ನು ಅರಸುವುದು, ಅವನನ್ನು ಅನುಸರಿಸುವುದು, ಅವನೊಂದಿಗೆ ನಡೆಯುವುದು, ಅವನ ಮೂಲಕ ನೋಡುವುದು, ಕೊನೆಗೆ ಅವನೇ ಆಗುವುದು.

*- ಥ್ಯುನ್ ಗಾದೆ*

**ಯದ್ಭೂತಹಿತಮತ್ಯಂತಂ**
**ತತ್ಸತ್ಯಮಿತಿ ಧಾರಣಾ ।**
**ವಿಪರ್ಯಯಕೃತೋಽಧರ್ಮಃ**
**ಪಶ್ಯ ಧರ್ಮಸ್ಯ ಸೂಕ್ಷ್ಮತಾಮ್ ॥**

ಯಾವುದು ಪರಮಾರ್ಥದಲ್ಲಿ ಪ್ರಾಣಿಗಳಿಗೆ ಹಿತಕಾರಿಯೋ ಅದೇ ಸತ್ಯವೆಂದು ನಿಶ್ಚಿತ. ಇದಕ್ಕೆ ವಿರುದ್ಧವಾದದ್ದು - ಪ್ರಾಣಿಗಳಿಗೆ ಅಹಿತಕಾರಿಯಾದದ್ದು ಅಧರ್ಮ. ಧರ್ಮವು ಎಷ್ಟು ಸೂಕ್ಷ್ಮವೆಂಬುದನ್ನು ನೋಡು!

*- ಮಹಾಭಾರತ*

# ಶ್ರೀ ರಾಮಕೃಷ್ಣ ಗುರುಕುಲಾಶ್ರಮ ಟ್ರಸ್ಟ್ (ರಿ)

ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ.
ಎಂ.ಎಲ್.ಹಳ್ಳಿ, ಸಾಗರ ತಾಲೂಕು
ಶಿವಮೊಗ್ಗ ಜಿಲ್ಲೆ
ಫೋನ್: 08183-296516
ಮೊ. 9449921950

ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ
ಪ್ರವಾಸಿ ಮಂದಿರ ಹತ್ತಿರ,
ಹೊಸನಗರ-577418 ಶಿವಮೊಗ್ಗ ಜಿಲ್ಲೆ
ಫೋನ್: 08185-221915
ಮೊ. 9449921950



ಮಾನ್ಯ ವಿದ್ಯಾಕಾಂಕ್ಷಿಗಳೇ.

"ನಮಗಿಂದು ಬೇಕಾಗಿರುವುದು ಕಬ್ಬಿಣದಂತಹ ಮಾಂಸ ಖಂಡಗಳು ಮತ್ತು ಉಕ್ಕಿನಂತಹ ನರಗಳು. ನಾವು ಬಹಳ ಕಾಲ ಅತ್ತಿದ್ದೇವೆ. ಇನ್ನು ಮುಂದೆ ಅಳುವುದು ಬೇಡ. ನಿಮ್ಮ ಕಾಲ ಮೇಲೆ ನೀವು ನಿಂತುಕೊಂಡು ಮನುಷ್ಯರಾಗಿ. ನಮಗಿಂದು ಬೇಕಾಗಿರುವುದು ಮಾನವ ನಿರ್ಮಾಣದ ಧರ್ಮ. ನಮಗಿಂದು ಬೇಕಾಗಿರುವುದು ಮಾನವ ನಿರ್ಮಾಣ ಸಿದ್ಧಾಂತಗಳು. ಸಮಗ್ರ ಮಾನವ- ನಿರ್ಮಾಣದ ಶಿಕ್ಷಣವೇ ನಮಗಿಂದು ಬೇಕಾಗಿರುವುದು" ಎಂದು ಸ್ವಾಮಿ ವಿವೇಕಾನಂದರು ಬಹಳ ಹಿಂದೆಯೇ ಅಭಿಪ್ರಾಯ ಪಟ್ಟಿದ್ದಾರೆ. ಇಂತಹ ಸಚ್ಚಾರಿತ್ರ್ಯವುಳ್ಳ ಧೀಮಂತ, ವಿನಯವಂತ, ಸತ್ಪುರುಷರ ನಿರ್ಮಾಣವು ಸುಸಂಸ್ಕೃತ ಹಾಗೂ ಶಿಸ್ತುಬದ್ಧವಾದ ಆಧ್ಯಾತ್ಮಿಕ ಮತ್ತು ವೈಜ್ಞಾನಿಕ ಶಿಕ್ಷಣದ ಮೂಲಕವೇ ಆಗಬೇಕಾಗಿದೆ.

ರಾಜ್ಯದಾದ್ಯಂತ ಬಂದಿರುವ ನೂರಾರು ಮಕ್ಕಳು ಇಲ್ಲಿ ಕಲಿಯುತ್ತಿದ್ದು, ಸಂಸ್ಥೆಯು ಅವರನ್ನು ಅಕ್ಕರೆಯಿಂದ, ಮಮತೆಯಿಂದ, ಪೋಷಿಸಿ ಹೃದಯವರಳಿಸಿ, ಅವರ ಅಂತರಂಗದಲ್ಲಿ ಹುದುಗಿರುವ ಪ್ರತಿಭೆಯನ್ನು ಚೈತನ್ಯಗೊಳಿಸಿ, ಅವರ ಆತ್ಮಬಲವನ್ನು ದೃಢಪಡಿಸಿ ಉತ್ತಮ ವ್ಯಕ್ತಿತ್ವವುಳ್ಳ ಸತ್‌ಪ್ರಜೆಗಳನ್ನಾಗಿ ರೂಪಿಸುತ್ತಿದೆ.

ನಿರ್ಮಲ ಹಾಗೂ ಪರಿಶುದ್ಧವಾದ ಪ್ರಾಕೃತಿಕ ವಾತಾವರಣದಲ್ಲಿ ನೆಲೆಗೊಂಡಿರುವ ಈ ಜ್ಞಾನದೇಗುಲಗಳು ಪರಿಪೂರ್ಣವಾದ ವ್ಯಾಸಂಗದ ವಿಕಾಸಕ್ಕೆ ನಾಂದಿ ಹಾಡುತ್ತಿವೆ. ಆಧ್ಯಾತ್ಮಿಕ, ನೈತಿಕ, ವೈಜ್ಞಾನಿಕ ಮತ್ತು ಕಿಯಾತ್ಮಕ ಶಿಕ್ಷಣವನ್ನು ಗುರುಕುಲ ಮಾದರಿಯಲ್ಲಿ ನೀಡುತ್ತಿರುವ ಈ ವಿದ್ಯಾಸಂಸ್ಥೆಗಳು ಮಕ್ಕಳ ಸರ್ವಾಂಗೀಣ ಪ್ರಗತಿಗಾಗಿ ಶ್ರಮಿಸುತ್ತಿವೆ. ದೇಶದಾದ್ಯಂತ ಖ್ಯಾತಿ ಹೊತ್ತ ಈ ಸಂಸ್ಥೆಗಳು ಮಕ್ಕಳನ್ನು ಸಾಧಕರನ್ನಾಗಿ ಪರಿವರ್ತಿಸಿ, ಸಮಾಜಕ್ಕೆ ಉತ್ತಮ ಪ್ರಜೆಗಳನ್ನು ಕೊಡುಗೆಯಾಗಿ ನೀಡಿರುವುದು ಸ್ಮರಣೀಯವಾಗಿದೆ.

1) **ಸಂಸ್ಥೆಯಲ್ಲಿರುವ ಸೌಲಭ್ಯಗಳು:-** ವಿಶಾಲವಾದ ಕಟ್ಟಡಗಳು, ತರಬೇತಿ ಪಡೆದ ಪ್ರತಿಭಾವಂತ ಬೋಧಕ ವರ್ಗ, ವಿಶಾಲವಾದ ಆಟದ ಮೈದಾನ, ಕಂಪ್ಯೂಟರ್ ಲ್ಯಾಬ್, ಗ್ರಂಥಾಲಯದ ವ್ಯವಸ್ಥೆ, ಸ್ಮಾರ್ಟ್ ತರಗತಿ, ಅಬಾಕಸ್, ಉತ್ತಮ ಹಾಗೂ ಶುಚಿ ರುಚಿಯಾದ ಸಸ್ಯಹಾರಿ ಊಟದ ವ್ಯವಸ್ಥೆ ಇತ್ಯಾದಿ.

2) **ಪಠ್ಯದ ಜೊತೆ ಪಠ್ಯೇತರ ಚಟುವಟಿಕೆಗಳು :-** ಪ್ರಾರ್ಥನೆ, ಧ್ಯಾನ, ಯೋಗ, ಕರಾಟೆ, ಸಂಗೀತ, ಆಟೋಟಗಳು, ಭರತನಾಟ್ಯ, ತಬಲ, ಚಿತ್ರಕಲೆ ಇತ್ಯಾದಿ.

3) **ಶಾಲೆಯಲ್ಲಿ ನಡೆಯುತ್ತಿರುವ ತರಗತಿಗಳು:-** ಎಲ್.ಕೆ.ಜಿ ಯಿಂದ 10ನೇ ತರಗತಿಯವರೆಗೆ ಆಂಗ್ಲಮಾಧ್ಯಮ (ಸ್ಟೇಟ್ ಮತ್ತು ಸಿಬಿಎಸ್‌ಸಿ ಸಿಲಬಸ್).

4) **ಸಂಸ್ಥೆಯ ಸಾಧನೆಗಳು:-**

* ಸ್ಪಷ್ಟವಾಗಿ ಓದಿ ಶುದ್ಧವಾಗಿ ಬರೆಯುವುದು.
* ಮೂಲಭೂತ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ.
* ಗುರುಕುಲ ಮಾದರಿ ವಾತಾವರಣವನ್ನು ನಿರ್ಮಾಣಮಾಡಿ ಅಕ್ಕರೆಯಿಂದ ಪ್ರತಿಯೊಬ್ಬ ವಿದ್ಯಾರ್ಥಿಗಳ ಬಗ್ಗೆ ಕಾಳಜಿವಹಿಸಿರುವುದು.
* ಎಸ್.ಎಸ್.ಎಲ್.ಸಿ ಫಲಿತಾಂಶ ಪ್ರತಿವರ್ಷ ಬಹುತೇಕ ಶೇ.100 ಹೆಚ್ಚು ಡಿಸ್ಟಿಂಕ್ಷನ್ಸ್ ಹಾಗೂ ತಾಲ್ಲೂಕಿಗೆ ಪ್ರಥಮ ಸ್ಥಾನ.
* ಕ್ರೀಡಾ ಕ್ಷೇತ್ರದಲ್ಲಿ ರಾಷ್ಟ್ರಮಟ್ಟದವರೆಗೂ ಪ್ರತಿನಿಧಿಸಿರುವುದು.
* ಪ್ರತಿಭಾ ಕ್ಷೇತ್ರದಲ್ಲಿ ರಾಜ್ಯಮಟ್ಟದವರೆಗೂ ದಾಖಲೆ ನಿರ್ಮಿಸಿರುವುದು.
* ಶಿಸ್ತು, ಸಂಸ್ಕೃತಿ, ಅಚ್ಚುಕಟ್ಟುತನ, ಜವಾಬ್ದಾರಿ ಈ ಬಗ್ಗೆ ತುಂಬಾ ಕಾಳಜಿ.

5) **ವಸತಿ ಶಾಲೆಗೆ ಪ್ರವೇಶ:-**

* 4ನೇ ತರಗತಿಯಿಂದ 9ನೇ ತರಗತಿಯವರೆಗೆ ಮಾತ್ರ
* ಪ್ರವೇಶ ಪರೀಕ್ಷೆ, ಸಂದರ್ಶನವಿರುತ್ತದೆ
* ಹೆಣ್ಣು ಮತ್ತು ಗಂಡು ಮಕ್ಕಳಿಗೆ ಪ್ರತ್ಯೇಕ ವಸತಿ ವ್ಯವಸ್ಥೆಯಿರುತ್ತದೆ
* ಪ್ರವೇಶಕ್ಕೆ ಅರ್ಜಿ ಮತ್ತು ಪ್ರಾಸ್ಪೆಕ್ಟಸ್‌ಗಾಗಿ ಶಾಲೆಯನ್ನು ಸಂಪರ್ಕಿಸಿ
* ಹೆಚ್ಚಿನ ವಿವರ ಶಾಲೆಯಲ್ಲಿ ಲಭ್ಯ





ಸಂಪಾದಕೀಯ

# ಸ್ಥಿತ್ಯಂತರಗಳು

**೧. ಜೀವನದ ಮೂಲಸೂತ್ರ :** ''ಅಯ್ಯೋ ಪಾಪ!.. ಎಲ್ಲ ಚೆನ್ನಾಗಿತ್ತು. ಎಷ್ಟೊಂದು ಆನಂದವಾಗಿದ್ದ, ಉತ್ಸಾಹದಿಂದ ಎಲ್ಲವನ್ನೂ ಮಾಡುತ್ತಿದ್ದ. ಪ್ರತಿಯೊಂದು ಕೆಲಸದಲ್ಲೂ ಅಷ್ಟೊಂದು ಅಚ್ಚುಕಟ್ಟು.. ಅದೇನಾಯಿತೋ! ಗ್ರಹಚಾರ ಬಡಿದಿರಬೇಕು. ಯಾವಾಗಲೂ ಗರ ಬಡಿದವರ ಹಾಗೆ ಚಿಂತೆ ಮಾಡುತ್ತ ಕುಳಿತು ಬಿಡುತ್ತಾನೆ. ಯಾವುದರಲ್ಲೂ ಆಸಕ್ತಿಯಿಲ್ಲ ; ಯಾರು ಏನು ಹೇಳಿದರೂ ಸಮಾಧಾನವಿಲ್ಲ. ದೇಹ ಸೊರಗಿ, ಕಡ್ಡಿಯಂತಾಗಿದ್ದಾನೆ. ಯಾಕೆ ಹೀಗಾಯಿತೋ – ದೇವರೇ ಬಲ್ಲ!..''

– ಇಂಥ ಗೋಳಿನ ಮಾತುಗಳು ಅಲ್ಲಲ್ಲಿ, ಆಗಾಗ ಕೇಳಿಬರುತ್ತವೆ. ಬಾಳ ದಾರಿಯಲ್ಲಿ ಪ್ರತಿಯೊಂದು ಹಂತದಲ್ಲೂ ಏರುತಗ್ಗುಗಳಿವೆ, ಬದಲಾವಣೆಗಳಿವೆ. ಹಲವು ಬಾರಿ ಸಹಜ, ಸುಂದರವಾಗಿ ಕಾಣಿಸುತ್ತಿದ್ದ ಬದುಕು ಇದ್ದಕ್ಕಿದ್ದಂತೆ ದಾರುಣವೆನಿಸುತ್ತದೆ. ನರಕಸದೃಶವಾದ ಸಂಕಟದಿಂದ ಬಿಡುಗಡೆಯೇ ಇಲ್ಲವೇನೋ ಅನ್ನಿಸುತ್ತದೆ. ಅದೇ ರೀತಿ, ಎಂತೆಂಥದೋ ಗಂಡಾಂತರದ, ಅನಿಶ್ಚಿತತೆಯ, ತೊಳಲಾಟದ ದಿನಗಳೆಲ್ಲ ಒಂದು ಅದ್ಭುತ ಘಳಿಗೆಯಲ್ಲಿ ಮಾಯವಾಗಿಬಿಡುತ್ತದೆ; ಸಮಾಧಾನದ ನಿಟ್ಟುಸಿರು ಬಿಡುತ್ತೇವೆ. ಹಕ್ಕಿಯಂತೆ, ಚಿಟ್ಟೆಯಂತೆ ಗರಿಗೆದರಿ ಬಾನಲ್ಲಿ ಹಾರಿಬಿಡೋಣವೆನಿಸುತ್ತದೆ; ಆದರೆ, ಪರಿಸ್ಥಿತಿಯ ಗಾಢತೆಯನ್ನು ಅವಲಂಬಿಸಿ, 'ಕೆಟ್ಟ ದಿನಗಳೆಲ್ಲ ಕಳೆದುಹೋದವು' ಎಂದೋ, 'ಅಂಥ ಶಾಂತಿ, ನೆಮ್ಮದಿಯ ದಿನಗಳೆಲ್ಲ ಮಾಯವಾದವು' ಎಂದೋ ಭಾವಿಸುತ್ತೇವೆ. ಜೀವನದಲ್ಲಿ ಯಾವುದೂ ಸ್ಥಿರವಲ್ಲ, ಒಂದೇ ರೀತಿ ಇರುವುದಿಲ್ಲ ಎಂಬ ಕಠಿಣ ಸತ್ಯವನ್ನು ನಾವು ಅನೇಕ ವೇಳೆ ಮರೆಯುತ್ತೇವೆ. ನಿರಂತರ ಬದಲಾವಣೆ, ಏರುಪೇರು, ಚಲನೆ ಜೀವನದ ಮೂಲಸೂತ್ರ. ಪ್ರತಿಕ್ಷಣವೂ ಜಗತ್ತು ಬದಲಾಗುತ್ತಿದೆ, ಪ್ರತಿ ವಸ್ತುವೂ ಬದಲಾಗುತ್ತಿದೆ. ಈ ನಿಯಮಕ್ಕನುಗುಣವಾಗಿಯೇ ಜಗತ್ತಿನ ಪ್ರತಿಯೊಂದು ವಸ್ತು, ಪ್ರತಿಯೊಂದು ಘಟನೆ, ಎಲ್ಲರ ಜೀವನ, ಎಲ್ಲ ಆಗುಹೋಗುಗಳು ನಡೆಯುತ್ತವೆ. ನಮಗರಿವಿಲ್ಲದೆಯೇ ನಡೆಯುವ ಈ ನಿರಂತರ ಬದಲಾವಣೆಯಲ್ಲಿ ಕೆಲವನ್ನು ಮಾತ್ರ ನಾವು ಗಮನಿಸುತ್ತೇವೆ; ಆದರೆ ಹಲವನ್ನು ಗಮನಿಸುವುದೇ ಇಲ್ಲ. ಆದರೆ ಇಡೀ ವಿಶ್ವವೇ ಒಂದು ಬೃಹತ್ ಯಂತ್ರದಂತೆ ನಿರಂತರ ತಿರುಗುತ್ತಿರುವಾಗ, ನಾವೂ ಅದರೊಂದಿಗೆ ತಿರುಗುತ್ತಿದ್ದೇವೆ; ಸಹಜವಾಗಿ ಜಗತ್ತಿನ ಹಲವು ಮಾರ್ಪಾಡುಗಳಲ್ಲಿ ಒಂದು ಅಂಗವಾಗಿ, ಅದರ ನೋವು ನಲಿವುಗಳಲ್ಲಿ ಭಾಗಿಯಾಗುತ್ತೇವೆ. ವಿವಿಧ ನೆಲೆಗಳಲ್ಲಿ, ವಿಭಿನ್ನ ಪರಿಸ್ಥಿತಿಗಳಲ್ಲಿ , ವಿವಿಧ ರೀತಿಯಲ್ಲಿ ನಡೆಯುವ ಹಲವು ಬಗೆಯ ಬದಲಾವಣೆಗಳೇ '**ಸ್ಥಿತ್ಯಂತರ**'ಗಳು.

**೨. ಪ್ರಪಂಚದ ಸಾಮಾನ್ಯ ನಿಯಮ :** 'ಇದೇಕೆ ಪ್ರಪಂಚ ಈ ಬಗೆಯ ಬದಲಾವಣೆಯ ನಿಯಮಕ್ಕೆ ಒಳಗಾಗಿ ನಡೆಯಬೇಕು? ಯಾವುದೇ ಗೊಂದಲವಿಲ್ಲದೆ, ಬದಲಾವಣೆಯಿಲ್ಲದೆ, ಶಾಶ್ವತವೂ ಸ್ಥಿರವೂ ಆದ ಜೀವನ ಸಾಧ್ಯವಿಲ್ಲವೆ? ಈ ರೀತಿ ನಿರಂತರ ಬದಲಾಗುವುದೇ ಇದರ ಗುಣವಾಗಿದ್ದರೆ, ನಾವು ಹೇಗೆ ಜೀವನದಲ್ಲಿ ಸ್ಥಿರತೆಯನ್ನು ಕಂಡುಕೊಳ್ಳಲು ಸಾಧ್ಯ? ಅಂಥ ಸ್ಥಿರತೆಯಿಲ್ಲದಿದ್ದರೆ ಜೀವನದಲ್ಲಿ ಏನು ಭರವಸೆಯಿದೆ?' – ಇಂಥ ಪ್ರಶ್ನೆಗಳು ಇಲ್ಲಿ ಸಹಜವಾಗಿ ಮೂಡಬಹುದು.

ಇಲ್ಲಿ ಒಂದು ಪ್ರಧಾನ ತತ್ತ್ವವನ್ನು ನಾವು ಗಮನಿಸಬೇಕು. ಸ್ಥಿರ–ಅಸ್ಥಿರ, ಶಾಶ್ವತ–ಅಶಾಶ್ವತ, ನಿತ್ಯ–ಅನಿತ್ಯ ಈ ದ್ವಂದ್ವಗಳೆಲ್ಲ ನಾವು ನೋಡುತ್ತಿರುವ ಈ ಪ್ರಪಂಚಕ್ಕೆ ಸಂಬಂಧಿಸಿದಂತೆ, ಸಾಪೇಕ್ಷವಾಗಿವೆ. ನನ್ನ ಮನಸ್ಸನ್ನು ಅವಲಂಬಿಸಿ ಜಗತ್ತು ಸ್ಥಿರವೋ, ಅಸ್ಥಿರವೋ ಆಗಿ ಕಾಣಿಸುತ್ತದೆ. ನನ್ನ ದೃಷ್ಟಿಗೆ ಅನುಗುಣವಾಗಿ ಜೀವನ ಸುಖವೋ, ದುಃಖವೋ ಆಗಿ ಕಾಣಿಸುತ್ತದೆ. ಜಗತ್ತು ನಿರಂತರ ಬದಲಾಗುತ್ತಿದೆ; ಬದಲಾಗುವ ಸಂಗತಿಗಳಲ್ಲೆಲ್ಲ ಸಮಾನತೆಯನ್ನೇ ಕಂಡರೆ ನಾನು, 'ಎಲ್ಲವೂ ಒಂದೇ ರೀತಿ ಇದೆ' ಎನ್ನುತ್ತೇನೆ. ಬದಲಾವಣೆಯೇ ಎದ್ದು ಕಾಣುವಂತಿದ್ದು, ವಸ್ತುವೋ, ಘಟನೆಗಳೋ, ವ್ಯಕ್ತಿಗಳೋ ಹೊತ್ತು ಹೊತ್ತಿಗೆ ಪರಿವರ್ತನೆ ಹೊಂದುವುದನ್ನು ಕಂಡಾಗ, 'ಯಾವುದೂ ಸ್ಥಿರವಿಲ್ಲ' ಎಂದು ಗೊಣಗಾಡುತ್ತೇನೆ.

ನಮ್ಮ ಬಯಕೆ, ಅಭಿರುಚಿ, ಅಗತ್ಯ ಹಾಗೂ ಅನಿವಾರ್ಯತೆಗಳಿಗೆ ತಕ್ಕಂತೆ ನಾವು ಜೀವನ ನಡೆಸುತ್ತೇವೆ. ಈ ಆಯ್ಕೆಯ ನಡುವೆ ಜಗತ್ತು ಹೇಗೋ ಮುಖಾಮುಖಿಯಾಗುತ್ತದೆ. ಆಗ ಸಹಜವಾಗಿ ಘರ್ಷಣೆ, ಗೊಂದಲ, ಮಿಲನ, ಹೊಂದಾಣಿಕೆ ಈ ಕ್ರಿಯೆಗಳು ಅನಿವಾರ್ಯ. ನಿರಂತರ ಬದಲಾಗುವ ಜಗತ್ತಿನಲ್ಲಿ ನಾವೂ ಬದಲಾಗುತ್ತೇವೆ; ನಮ್ಮ ನಮ್ಮ ಅನುಭವಗಳ ನಡುವೆ ಯಾವುದು ನಮಗೆ ಆಪ್ತವೋ, ಯಾವುದು 'ನಮ್ಮ'ದೆನಿಸುವುದೋ, ಅದನ್ನು ಸ್ಥಿರಗೊಳಿಸಲು ಯತ್ನಿಸುತ್ತ ಹೋಗುತ್ತೇವೆ. ನಮ್ಮ ಪ್ರಯತ್ನ, ಸಾಮರ್ಥ್ಯ, ಸಾಧ್ಯತೆಗಳು ಹಾಗೂ ಬಾಹ್ಯ ಸ್ಥಿತಿಗಳನ್ನು ಅವಲಂಬಿಸಿ ನಾವು ಸಫಲರೋ, ವಿಫಲರೋ ಆಗುತ್ತೇವೆ. ಹೀಗೆ ನಮಗೆ ಬದುಕು ವಿಭಿನ್ನ ರೀತಿ ಕಾಣಿಸುತ್ತದೆ. ನಿರಂತರ ಬದಲಾವಣೆಯ ನಡುವೆ, ಬದಲಾಗದ ಶಾಶ್ವತ ಆನಂದವನ್ನು ಅರಸುತ್ತ ಹೋಗುವುದೇ ಮಾನವನ ಮೂಲ ಪ್ರವೃತ್ತಿ. ಆದರೆ ಪ್ರಪಂಚದಲ್ಲಿ ಪ್ರತಿಯೊಂದೂ ಬದಲಾಗುವುದರಿಂದ, ಈ ಅರಸುವಿಕೆ ಕೇವಲ ಶಾಶ್ವತದ ಭ್ರಮೆಯನ್ನು ಮಾತ್ರ ಹುಟ್ಟಿಸುತ್ತದೆ, ಹೆಚ್ಚೆಂದರೆ ದೀರ್ಘ ಕಾಲಾವಧಿಯ ಒಂದು ವಿಶಾಲ ಭಾವವನ್ನಷ್ಟೇ ನೀಡುತ್ತದೆ. ಆದರೆ ಮಾನವನ ಪ್ರವೃತ್ತಿ ಅಲ್ಲಿಗೆ ನಿಲ್ಲದು. ಹಲವರು ಪ್ರಪಂಚದ ಸಂಗತಿಗಳಲ್ಲೇ ಮೈಮರೆತರೂ, ಕೆಲವರಾದರೂ ಪ್ರಪಂಚವನ್ನು ದಾಟಿ ಶಾಶ್ವತ ಸತ್ಯವನ್ನು ತಲುಪುವ, ಆ ಮೂಲಕ ಶಾಶ್ವತ ಆನಂದವನ್ನು ಕಾಣುವ ದೃಷ್ಟಿ ಹೊಂದಿರುತ್ತಾರೆ.

**೩. ಮಾನವನ ಜೀವನದಲ್ಲಿ :** ಮಾನವನು ಹುಟ್ಟಿದಂದಿನಿಂದಲೇ ಹೊರಜಗತ್ತಿನಲ್ಲಿ ಹೇಗೋ ಹಾಗೆಯೇ ತನ್ನಲ್ಲೂ ಉಂಟಾಗುವ ಬದಲಾವಣೆಗಳನ್ನು ಗಮನಿಸುತ್ತಾನೆ. ಶೈಶವದಲ್ಲಿ ಪ್ರಪಂಚವನ್ನು ಕಂಡು

ವಿಸ್ಮಯ ಹೊಂದುತ್ತಾನೆ, ಹೊಸತನ್ನು ಕಲಿಯುತ್ತಾನೆ. ತನ್ನ ದೇಹದಲ್ಲೂ, ಅರಿವಿನಲ್ಲೂ ಉಂಟಾಗುವ ಬದಲಾವಣೆ, ಒಡನಾಟ-ಸಂಬಂಧಗಳು, ವಿದ್ಯಾಭ್ಯಾಸ; ಕೌಮಾರ್ಯ, ಯೌವನ ಇವು ತೆರೆಯುವ ಭಾವಪ್ರಪಂಚ; ವೈವಾಹಿಕ ಜೀವನ, ಕೌಟುಂಬಿಕ ಜವಾಬ್ದಾರಿ; ಮಾಗುತ್ತ ಬರುವ ಅನುಭವಗಳು, ಸಡಿಲವಾಗುವ ದೇಹ, ಇಂದ್ರಿಯ; ಕೊನೆಗೊಂದು ದಿನ ನಿರ್ಗಮನ – ಹೀಗೆ ಮಾನವನ ಬದುಕಿನಲ್ಲಿ ಪರಿಸ್ಥಿತಿ ಬದಲಾಗುತ್ತ ಹೋಗುತ್ತದೆ.

ಮಾನವ ಎಷ್ಟೇ ಸ್ವತಂತ್ರ ಬದುಕಿನ ಕಲ್ಪನೆ ಮಾಡಿಕೊಂಡರೂ, ಅವನು ಬಾಹ್ಯ ಪ್ರಪಂಚದೊಂದಿಗೆ ಒಂದಲ್ಲ ಒಂದು ರೀತಿ ಬದ್ಧನಾಗಿರುತ್ತಾನೆ. ಸಮಾಜ, ಭೌತಿಕ ಜಗತ್ತು, ಜಾಗತಿಕ ಆಗುಹೋಗುಗಳು ಅವನ ವೈಯಕ್ತಿಕ ಬದುಕಿನೊಂದಿಗೆ ಯಾವಾಗಲೂ ಬೆಸೆದಿರುತ್ತವೆ. ಅವನು ಅವುಗಳಿಂದ ಬದಲಾವಣೆ ಹೊಂದುತ್ತಾನೆ, ಸ್ವತಃ ತಾನೂ ಬಾಹ್ಯಜಗತ್ತಿನ ಮೇಲೆ ಕೆಲವೊಂದು ಪ್ರಭಾವಗಳನ್ನು ಬೀರುತ್ತಾನೆ. ಹೀಗೆ ವ್ಯಕ್ತಿ ಮತ್ತು ಪ್ರಪಂಚ – ಇವೆರಡರ ನಡುವಿನ ನಿರಂತರ ಕೊಡು-ಕೊಳ್ಳುವಿಕೆ ಪರಸ್ಪರ ಪ್ರಭಾವ ಬೀರುವುದು ಇವೆರಡರಲ್ಲೂ ಅನೇಕ ಬದಲಾವಣೆಗಳನ್ನು ಉಂಟುಮಾಡುವುದು. ಹೀಗೆ ಮಾನವನ ಒಳಗೇ ನಡೆಯುವ ಬದಲಾವಣೆ, ಏರುಪೇರುಗಳು ಪೂರ್ಣವಾಗಿ ಅವನ ಹಿಡಿತದಲ್ಲಿರದೆ, ಬಾಹ್ಯಜಗತ್ತಿನಿಂದಲೂ, ಇತರ ವ್ಯಕ್ತಿಗಳಿಂದಲೂ ನಿರ್ಧಾರಿತವಾಗುವುದು ಎಂದಾದರೆ, ಮನುಷ್ಯ ಕೇವಲ ಇನ್ನಿತರ ಶಕ್ತಿಗಳ ಕೈಗೊಂಬೆ ಎಂದಂತಲ್ಲವೆ? ಇದು ಅವನ ಸಾಮರ್ಥ್ಯ, ಆತ್ಮವಿಶ್ವಾಸಗಳಿಗೆ ಅವಹೇಳನ ಮಾಡಿದಂತಲ್ಲವೆ? ನಿಜವಾಗಿಯೂ ಅದು ಹಾಗಿರಬೇಕಿಲ್ಲ. 'ಅದೇಕೆ?' – ಎಂಬ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವ ಮೊದಲು, ಸ್ಥಿತ್ಯಂತರಗಳು ಯಾವ ವಲಯಗಳಲ್ಲಿ ಗೋಚರವಾಗುವುವು ಎನ್ನುವುದನ್ನು ನೋಡೋಣ.

**೪. ಬಾಹ್ಯ ಸ್ಥಿತ್ಯಂತರಗಳು :** ಹೊರಜಗತ್ತಿನಲ್ಲಿ (ಅಂದರೆ ಭೌತಿಕ ಪ್ರಪಂಚ, ಮತ್ತು ಜೀವಪ್ರಪಂಚ ಎರಡೂ ಸೇರಿ) ನಡೆಯುವ ಬದಲಾವಣೆಗಳೇ ಬಾಹ್ಯ ಸ್ಥಿತ್ಯಂತರ.

ವ್ಯಕ್ತಿ ಎಂದೂ ದ್ವೀಪವಲ್ಲ ; ಜಗತ್ತಿನೊಂದಿಗೆ ಅವನು ಸದಾ ಸಂಬಂಧಪಟ್ಟಿರುತ್ತಾನೆ. ಎಲ್ಲ ಬದಲಾವಣೆಗಳೂ ನಮ್ಮಲ್ಲಿ ಅಥವಾ ಜಗತ್ತಿನಲ್ಲಿ ಎಂಬುದು ಖಚಿತ. ಆದ್ದರಿಂದ ಆಂತರಿಕ-ಬಾಹ್ಯ ಎಂದು ಎರಡು ಬಗೆಯ ಸ್ಥಿತ್ಯಂತರಗಳನ್ನು ನಾವು ಗ್ರಹಿಸಬೇಕು. ನಿಸರ್ಗದಲ್ಲಿ ನಿರಂತರ ಪರಿವರ್ತನೆಯುಂಟಾಗುತ್ತಿರುತ್ತದೆ. ಹವಾಮಾನ, ಋತುಗಳಲ್ಲಾಗುವ ಬದಲಾವಣೆ; ಮಳೆ ಗಾಳಿ, ಸೆಖೆ, ಶೀತವೇ ಮುಂತಾದ ಋತುಭೇದ, ಹಗಲು-ರಾತ್ರಿ, ಕತ್ತಲು-ಬೆಳಕು ಹೀಗೆ ಕಾಲವನ್ನು ಅವಲಂಬಿಸಿದ ಪರಿವರ್ತನೆಗಳಿಂದ ನಮ್ಮ ಜೀವನಕ್ರಮದಲ್ಲೂ ಅನೇಕ ಬದಲಾವಣೆಗಳಾಗುತ್ತವೆ. 'ಬಾಹ್ಯ' ವೆಂದರೆ ಕೇವಲ ಭೌತಿಕ ಜಗತ್ತಷ್ಟೇ ಅಲ್ಲ; ಒಬ್ಬ ವ್ಯಕ್ತಿಯ ಪಾಲಿಗೆ ಇತರ ವ್ಯಕ್ತಿಗಳೂ ಬಾಹ್ಯವೇ; ಈ ಅರ್ಥದಲ್ಲಿ ಇಡೀ ಜಗತ್ತೇ ಬಾಹ್ಯವೆನ್ನಬೇಕು. ಮಾನವನ ಬೌದ್ಧಿಕ ವಿಕಸನ ಕ್ಷಿಪ್ರ ಗತಿಯಲ್ಲಿ ಅಭಿವೃದ್ಧಿ ಹೊಂದಿದಾಗಿನಿಂದ, ಭೌತಿಕ ಪ್ರಪಂಚವನ್ನೇ ಅವನು ಬದಲಾಯಿಸಿದ. ಆದ್ದರಿಂದ, 'ಬಾಹ್ಯ'ವೆಂದರೆ ಭೌತಿಕ ಜಗತ್ತು ಎಂಬುದಕ್ಕಿಂತ, 'ಸಮಾಜ' ಎನ್ನುವುದೇ ಮುಖ್ಯ. ಹಲವು ವ್ಯಕ್ತಿಗಳ ಸಮೂಹವಾಗಿರುವ ಸಮಾಜವು ಭೌತಿಕ ಜಗತ್ತಿನ ಮೇಲೆ ತನ್ನ ಆಧಿಪತ್ಯವನ್ನು ಸ್ಥಾಪಿಸಿರುವುದರಿಂದ, ಪ್ರಕೃತಿಗಿಂತ ಮಾನವ ಸಮಾಜವೇ ಪ್ರಬಲವೆನ್ನುವುದು ನಿಜ. ಆದ್ದರಿಂದ, ವ್ಯಕ್ತಿಯು ಸಮಾಜದಿಂದ ಸಾಕಷ್ಟು ಪ್ರಭಾವ ಹೊಂದುತ್ತಾನೆ, ಬದಲಾಗುತ್ತಾನೆ.

ಇದರೊಂದಿಗೆ ಇನ್ನೂ ಕೆಲವು ಸಂಗತಿಗಳು ವ್ಯಕ್ತಿಯಲ್ಲಿ ಅನೇಕ ಬದಲಾವಣೆಗಳನ್ನು ತರಬಲ್ಲವು : ಉದಾಹರಣೆಗೆ, ಆಕಸ್ಮಿಕ ಘಟನೆಗಳು, ಭಾವನಾತ್ಮಕವಾದ ಸಂಗತಿಗಳು. ಇವು ಬಾಹ್ಯಪ್ರಪಂಚದ ಆಗುಹೋಗುಗಳಲ್ಲೇ ಅಡಕವಾಗುವುವು, ನಿಜ; ಆದರೆ ಬಾಹ್ಯಜಗತ್ತಿನಲ್ಲಾಗುವ ಆಕಸ್ಮಿಕ ಘಟನೆಗಳು, ಅನಿರೀಕ್ಷಿತ ಸಂಗತಿಗಳು ವ್ಯಕ್ತಿಯ ಆಂತರಿಕ ಜಗತ್ತಿನಲ್ಲಿ 'ಆಘಾತ'ವಾಗಿ ಪರಿಣಮಿಸಿ, ದಟ್ಟ ಪ್ರಭಾವ ಬೀರಬಲ್ಲವು. ಇವೆಲ್ಲವೂ 'ಸಮಾಜ'ದ ಅಂಗವಲ್ಲವೆ? – ಎಂಬ ಪ್ರಶ್ನೆಯೇಳಬಹುದು. ಖಂಡಿತ ಇವು ಸಮಾಜದ ಅಂಗವೇ; ಆದರೆ ಈ ಆಕಸ್ಮಿಕಗಳು ಸಮಾಜದ ನಿಯಂತ್ರಣದಲ್ಲಿಲ್ಲದ ಘಟನೆಗಳು ಎಂಬುದು ಮುಖ್ಯ.

**೫. ಆಂತರಿಕ ಸ್ಥಿತ್ಯಂತರಗಳು :** ಮನುಷ್ಯನಲ್ಲಿ ಉಂಟಾಗುವ ಆಂತರಿಕ ಬದಲಾವಣೆಗಳಿಗೆ ಬಾಹ್ಯ ಪ್ರಭಾವಗಳು ಎಷ್ಟು ಕಾರಣವೋ, ತನ್ನೊಳಗಿನಿಂದಲೇ ಹುಟ್ಟುವ ಆಂತರಿಕ ಅಂಶಗಳೂ ಅಷ್ಟೇ ಕಾರಣವಾಗುತ್ತವೆ. ಅಂದರೆ, ವ್ಯಕ್ತಿಯು ಬಾಹ್ಯ ಸ್ಥಿತ್ಯಂತರಗಳ ಕೈಗೊಂಬೆಯಲ್ಲ; ಅವನ ಅಂತರಂಗದ ಹಲವು ಸಂಗತಿಗಳೂ ಅನೇಕ ಬದಲಾವಣೆಗಳಿಗೆ ಕಾರಣವಾಗುತ್ತವೆ. ಅಂದರೆ, ಅವನು ಕೇವಲ ಬಾಹ್ಯ ಪ್ರಭಾವಗಳ ನೆರಳಿನಲ್ಲಿ ಬದುಕಬೇಕಾಗಿಲ್ಲ; ಹೊಸ ಬದಲಾವಣೆಗಳನ್ನು ಹುಟ್ಟುಹಾಕುವ ಸಾಮರ್ಥ್ಯವೂ ಅವನಲ್ಲಿದೆ ಎಂದಂತಾಯಿತು. ಮನುಷ್ಯನ ಆಂತರಿಕ ಅಂಗಗಳೆಂದರೆ ಪ್ರಧಾನವಾಗಿ ಮನಸ್ಸು ಹಾಗೂ ಬುದ್ಧಿ. ಇವೆರಡೂ ಮನುಷ್ಯನ ಅಂತಃಕರಣದ ಬೇರೆ ಬೇರೆ ರೂಪಗಳಷ್ಟೇ. ಆದ್ದರಿಂದ, ಇಲ್ಲಿನ ಬದಲಾವಣೆಗಳನ್ನು ಮಾನಸಿಕ ಸ್ಥಿತ್ಯಂತರಗಳೆಂದೇ ಕರೆಯಬಹುದು.

ನಮ್ಮಲ್ಲಾಗುವ ಈ ಆಂತರಿಕ ಬದಲಾವಣೆಗಳನ್ನು ನಾವು ಹಲವು ವೇಳೆ ಗಮನಿಸುವುದಿಲ್ಲ. ನಮಗರಿವಿಲ್ಲದೆ ನಾವು ಇತರ ಪ್ರಭಾವಗಳ ಫಲವಾಗಿ ಅನೇಕ ಬದಲಾವಣೆಗಳಿಗೆ ಒಳಗಾದರೆ ಅದರಿಂದಾಗುವ ತೊಂದರೆಯೇನು? – ಹಲವು ಬಗೆಯ ಮಾನಸಿಕ ತೊಳಲಾಟ, ಸಂಕಟ, ಗೊಂದಲಗಳಿಂದ ನರಳುತ್ತೇವೆ. ಇತ್ತೀಚೆಗೆ ನಮ್ಮ ದೇಶದಲ್ಲಿ ಯುವಜನತೆ ಎದುರಿಸುತ್ತಿರುವ ಸಮಸ್ಯೆ ಇದೇ. ವಿವಿಧ ಮಾನಸಿಕ ಸಮಸ್ಯೆಗಳಿಂದ ಇಡೀ ಜೀವನವನ್ನೇ ವ್ಯರ್ಥಮಾಡಿ ಕೊಳ್ಳುವ ಪರಿಸ್ಥಿತಿ ಎದುರಾಗುತ್ತದೆ. ನಮ್ಮಲ್ಲಿ ಉಂಟಾಗಿರುವ ತೊಂದರೆಯೇನು, ನಮ್ಮಲ್ಲಾಗಿರುವ ಮಾನಸಿಕ ಬದಲಾವಣೆಯೇನು, ಅದಕ್ಕೆ ಕಾರಣವೇನು ಎಂದು ತಿಳಿದಿದ್ದರಲ್ಲವೇ ನಾವು ಅದಕ್ಕೆ ಪರಿಹಾರ ಕಂಡುಕೊಳ್ಳಬಹುದು? ಈಗ, ನಮ್ಮನ್ನು ಕಂಗೆಡಿಸುವ ಆಂತರಿಕ ಬದಲಾವಣೆಗಳ ಒಂದು ಸ್ಥೂಲ ಅವಲೋಕನ ಮಾಡೋಣ:

**i) ಗೊಂದಲ:** ವಿನಾಕಾರಣ ಗೊಂದಲ ಮಾಡಿಕೊಳ್ಳುವುದು ಒಂದು ಸಾಮಾನ್ಯ ತೊಂದರೆ. ಹೊರಗೇನಿದೆ, ತಾನು ಹೇಗೆ ಅದನ್ನು ಕಾಣುತ್ತಿದ್ದೇನೆ ಎಂದು ಅರ್ಥ ಮಾಡಿಕೊಳ್ಳದೆ ಹೋದಾಗ ಗೊಂದಲವುಂಟಾಗುತ್ತದೆ. ಒಂದು ವಿಷಯವನ್ನು ಗ್ರಹಿಸುವಾಗ ಅಲ್ಲಿ ನಮ್ಮ ಭಾವನೆ ಮುಖ್ಯವಾಗುತ್ತದೆ. ನಿರಾಸಕ್ತಿ, ಅತಿಯಾದ ಆಸಕ್ತಿ – ಇವೆರಡೂ ಗೊಂದಲಕ್ಕೆಡೆ ಮಾಡುತ್ತವೆ. ಶಾಂತವಾದ ಮನಃಸ್ಥಿತಿಯಲ್ಲಿ,

ಇವೆರಡರ ನಡುವೆ ಸಮತೋಲನವಿದ್ದಾಗ ಸಹಜವಾದ 'ಆಸಕ್ತಿ' ಇರುತ್ತದೆ. ಅದೇ ಪ್ರತಿಯೊಂದನ್ನೂ ಗ್ರಹಿಸುವ ಉತ್ತಮ ಸ್ಥಿತಿ. ಮನಸ್ಸು ಶಾಂತ ಸ್ಥಿತಿಯಲ್ಲಿದ್ದಾಗಲೇ ಚೆನ್ನಾಗಿ ಆಲೋಚಿಸಬಹುದು. ಆಗ ಬುದ್ಧಿ ಕೆಲಸ ಮಾಡುವುದು, ಹಾಗೂ ಹೊಸತನ್ನು ಕಂಡುಕೊಳ್ಳು ವುದು. ಇಂಥ ಶಾಂತ ಮನಸ್ಥಿತಿಯಲ್ಲೇ ಮಾನಸಿಕ ಆರೋಗ್ಯ, ದೈಹಿಕ ಆರೋಗ್ಯ ಇವೆರಡೂ ಅತ್ಯುತ್ತಮವಾಗಿರುತ್ತವೆ. ಗೊಂದಲ ವನ್ನು ನಿವಾರಣೆ ಮಾಡಿಕೊಳ್ಳಲು ಮೊದಲನೆಯದಾಗಿ, 'ನನ್ನಲ್ಲಿ ಗೊಂದಲವಿದೆ' ಎಂದು ಗುರುತಿಸಬೇಕು. ಉದ್ವೇಗ, ಒತ್ತಡ ನಮ್ಮಲ್ಲಿ ಇರುವುದನ್ನು ಅರಿತಾಗಲೇ ನಾವು ಅವುಗಳಿಂದ ಬಿಡಿಸಿಕೊಳ್ಳಲು ಯತ್ನಿಸುತ್ತೇವೆ. ಆ ಕ್ಷಣದಿಂದಲೇ 'ನನ್ನ ನಿಜವಾದ ಸ್ಥಿತಿ ಇದಲ್ಲ, ಶಾಂತವಾದ, ಲಯಬದ್ಧವಾದ, ಸಮತೋಲನದ ಸ್ಥಿತಿಯೇ ನನ್ನ ಸಹಜ ಸ್ಥಿತಿ' ಎಂದು ಭಾವಿಸಬೇಕು; ತತ್‌ಕ್ಷಣವೇ ಮನಸ್ಸು ಸಹಜ ತೆಯ ಕಡೆಗೆ ಹೊರಳತೊಡಗುವುದು. ಗೀತೆಯಲ್ಲಿ '**ಉದ್ಧರೇ ದಾತ್ಮನಾತ್ಮಾನಂ**' (ತನ್ನನ್ನು ತಾನು ಉದ್ಧರಿಸಿಕೊಳ್ಳಬೇಕು) ಎಂದಿರು ವುದರ ಅರ್ಥ ಇದೇ. ಪ್ರಯತ್ನ, ಅಭ್ಯಾಸದಿಂದ ಇಂಥ ಗೊಂದಲ ವನ್ನು ನಿವಾರಿಸಿಕೊಳ್ಳಬಹುದು.

**ii) ಖಿನ್ನತೆ:** ಜೀವನದ ಕೆಲವು ಘಟನೆಗಳು ಕೆಲವೊಂದು ಕಹಿ ಅನುಭವಗಳನ್ನು ಉಂಟುಮಾಡುತ್ತವೆ. ಅಂತೆಯೇ ಕೆಲವು ಸಮಸ್ಯೆ ಗಳು ಮಾಗದ ಗಾಯವನ್ನು ಉಳಿಸಿ ಹೋಗುತ್ತವೆ. ಅಂಥ ಸಂದರ್ಭ ದಲ್ಲಿ ಅನೇಕರು ಖಿನ್ನತೆಗೊಳಗಾಗುತ್ತಾರೆ. ಕೆಲವು ಬಗೆಯ ಸಂಕಟ, ದುಃಖ, ಯಾತನೆಗಳು ತಾತ್ಕಾಲಿಕವಾಗಿದ್ದು, ಅವು ಮಾಯವಾ ದೊಡನೆ ವ್ಯಕ್ತಿಯಲ್ಲಿ ಉಂಟಾಗುವ ಚಿಂತೆಯೂ ತೊಲಗುತ್ತದೆ. ಆದರೆ ಪರಿಹಾರವೇ ಇಲ್ಲದ ಸಮಸ್ಯೆಯುಂಟಾದಾಗ ವ್ಯಕ್ತಿ ಅದನ್ನೇ ನಿರಂತರ ಚಿಂತಿಸುತ್ತ, ಅದೇ ಒಂದು ಕೊರಗಾಗಿ ಪರಿಣಮಿಸಿ, ಅದೇ ಅವನನ್ನು ಸುಡಲಾರಂಭಿಸುತ್ತದೆ. ಈ ಚಿಂತೆಯೆಂಬ 'ಚಿತೆ'ಯನ್ನೇ 'ಖಿನ್ನತೆ'ಯೆನ್ನುತ್ತೇವೆ. ಇಂಥ ಸಮಸ್ಯೆಯುಂಟಾದಾಗಲೇ ಜನರು, 'ಓ ಹೇಗಿದ್ದವನು ಹೇಗಾದ!' ಎಂದು ಉದ್ಗರಿಸುತ್ತಾರೆ.

ಪ್ರಪಂಚದಲ್ಲಿ ಅನೇಕ ಸಮಸ್ಯೆಗಳಿಗೆ ಪರಿಹಾರವಿರುವುದಿಲ್ಲ. ಅಂಥ ಸಮಸ್ಯೆ ಬಂದೊದಗಿದಾಗ ಏನು ಮಾಡಬೇಕು? ಹಲವು ಬಾರಿ ಅವುಗಳು ನಮ್ಮ ಜೀವನಕ್ಕೆ ಅಂಟಿಕೊಂಡೇ ಇರುತ್ತವೆ. ಪ್ರತಿ ಯೊಬ್ಬನಿಗೂ ಒಂದಲ್ಲ ಒಂದು ಮಾಗದ ಗಾಯ ಇದ್ದೇ ಇರುತ್ತದೆ (ಉದಾಹರಣೆಗೆ: ಎಂದಿಗೂ ಮಾಗದ ಕಾಯಿಲೆ, ಕೌಟುಂಬಿಕ ಸಮಸ್ಯೆ, ಇತ್ಯಾದಿ). ಅದನ್ನು ಒಪ್ಪಿಕೊಂಡು, ಇದ್ದುದ್ದರಲ್ಲಿ 'ಅತ್ಯು ತ್ತುಮ ಬದಲಿ ವ್ಯವಸ್ಥೆ' ಏನು ಎಂದು ಕಂಡುಕೊಳ್ಳಬೇಕು. ಇದರಿಂದ ಸಮಸ್ಯೆ ಸಂಪೂರ್ಣ ತೊಲಗದಿದ್ದರೂ, ಅದರಿಂದ ಉಂಟಾಗುವ ಇನ್ನೊಂದು ಪ್ರಬಲ ರೋಗ, 'ಖಿನ್ನತೆ'ಯನ್ನು ನಿವಾರಿಸಬಹುದು.

**iii) ನಿರಾಸೆ:** ಜೀವನದಲ್ಲಿ ಸೋಲು ಎಂಬುದು ಅನೇಕ ಬಾರಿ ಎದುರಿಸಲೇಬೇಕಾದ ಒಂದು ಸ್ಥಿತಿ. ಹಲವರು ಇಂತಹ ಸೋಲು ಗಳಿಂದ ತತ್ತರಿಸಿಹೋಗುತ್ತಾರೆ; ಮುಂದೆ ಪ್ರಯತ್ನಿಸಲಾಗದೆ ಕುಗ್ಗಿ ಹೋಗುತ್ತಾರೆ. ಅವರ ನಿಶ್ಶಕ್ತಿಯೇ ಮತ್ತಷ್ಟು ಸೋಲುಗಳನ್ನು ತರು ತ್ತವೆ. ಇದರಿಂದ ಹೊಸದಾಗಿ ಬಂದು ಸೇರುವ ಮಾನಸಿಕ ಯಾತ ನೆಯೇ ನಿರಾಸೆ. ಯಾವುದರಲ್ಲೂ ಮನಸ್ಸಿಲ್ಲ, ಆಸಕ್ತಿಯಿಲ್ಲ, ಏನಾದ ರಾಗಲಿ, ಬದುಕೇ ಬೇಡವಾಗಿದೆ. ಜೀವನದಲ್ಲಿ ಏನೇನೂ ಸಾರವಿಲ್ಲ – ಎಂಬ ಜುಗುಪ್ಸೆಗೆ ಇದು ಕಾರಣವಾಗುತ್ತದೆ. ಆದರೆ, ಎಂದಿಗೂ ಸೋಲದೆ ಗೆದ್ದವರು ಯಾರಿದ್ದಾರೆ? ಮತ್ತೆ ಮತ್ತೆ ಪ್ರಯತ್ನಿಸಿ, ಎದೆ ಗುಂದದೆ ಹೋರಾಡುವ ಮೂಲಕವೇ ಪ್ರತಿಯೊಬ್ಬರೂ ಅನೇಕ ಸಾಧನೆಗಳನ್ನು ಮಾಡುತ್ತಾರೆ. ಸ್ವಾಮಿ ವಿವೇಕಾನಂದರು ಅತ್ಯಂತ ಸ್ಫೂರ್ತಿ ಕೊಡುವ ಮಾತನ್ನೇ ಹೇಳುತ್ತಾರೆ: 'ಸೋಲುವುದು, ಸ್ವಲ್ಪ ಹಿಂದೆ ಜಾರುವುದು ಇವನ್ನು ನೀವು ಗಮನಿಸಬೇಕಾಗಿಲ್ಲ. ಸಾವಿರ ವೇಳೆ ಆದರ್ಶವನ್ನು ಹಿಡಿದುಕೊಳ್ಳಿ. ಸಾವಿರ ಸಲ ಸೋತರೂ ಮತ್ತೊಮ್ಮೆ ಪ್ರಯತ್ನಿಸಿ.' *(ಕೃತಿಶ್ರೇಣಿ, ೨.೮೮)* ಇದು ಭರವಸೆಯ ಮಾತು. ಆದರೆ ಅದು ಕೇವಲ ಬೆನ್ನುತಟ್ಟುವ ಮಾತಲ್ಲ, ಸತ್ಯವೂ ಹೌದು. ಸೋಲಿಗೆ ಎದೆಗುಂದದೆ ನಿರಂತರ ಪ್ರಯತ್ನಿಸುವವನಿಗೆ ಜೀವನದ ರಹಸ್ಯವೇ ತಿಳಿದಿರುತ್ತದೆ. ಒಂದೇ ಗೆಲುವಾದರೂ ಸರಿ, ಅವನಿಗೆ ಹೊಸ ಹುರುಪನ್ನು ನೀಡುವುದು. ನಿರಾಸೆ ಕೇವಲ ಕ್ಷಣಿಕ; ಅದು ಹೋದೊಡನೆ ಹೊಸ ಉತ್ಸಾಹ ಬರುತ್ತದೆ ಎಂದು ಯಾವಾ ಗಲೂ ನೆನಪಿನಲ್ಲಿಟ್ಟುಕೊಳ್ಳಬೇಕು. ಆಗ ಮರಳಿ ಮರಳಿ ಬರುವ ನಿರಾಸೆಯ ಭಾವನೆ ಬಲಗೊಳ್ಳದಂತೆ ತಡೆಯಬಹುದು. ನಿರಂತರ ನಿರಾಸೆಯ ಮನಸ್ಥಿತಿಯಲ್ಲೇ ಇದ್ದು, ಅದರಿಂದ ಹೊರ ಬರಲಾರದೆ ಒದ್ದಾಡುವವನಿಗೆ ಅದೇ ಒಂದು ಮಾನಸಿಕ ರೋಗವಾಗುವುದು. ಹೊಸ ಅವಕಾಶ, ಹೊಸ ಪ್ರಯತ್ನ, ಹೊಸ ಸಾಧ್ಯತೆ – ಹೀಗೆ ನಿರಂತರ ಪ್ರಯತ್ನಿಸುತ್ತಿರಬೇಕು. ಇದೇ ಆರೋಗ್ಯಕರ ಮನಃಸ್ಥಿತಿ ಯನ್ನು ನಮಗೆ ಒದಗಿಸುವುದು.

**iv) ಸಂದೇಹ:** ಸಮಾಜದಲ್ಲಿ ಹಲವೆಡೆ ಮೋಸ, ವಂಚನೆ, ಸುಳ್ಳು, ಭ್ರಷ್ಟಾಚಾರಗಳನ್ನು ನೋಡುವಾಗ ಎಲ್ಲರ ಮೇಲೂ ಸಂದೇಹ ಮೂಡುವುದು ಸಹಜ. ಆದರೆ ಈ ದುರ್ಗುಣಗಳನ್ನು ನಾವು ಸಾರ್ವತ್ರಿಕಗೊಳಿಸುವುದು ತಪ್ಪು. ಇದೇ ಸಮಾಜದಲ್ಲಿ ಸತ್ಯ ವಂತರೂ, ಪ್ರಾಮಾಣಿಕರೂ, ಕರ್ತವ್ಯನಿಷ್ಠರೂ, ಉತ್ತಮರೂ ಆದ ವ್ಯಕ್ತಿಗಳು ಎಷ್ಟಿಲ್ಲ? ಅನೇಕರು ಎದ್ದು ಕಾಣುವಂತಿಲ್ಲದೆ 'ಎಲೆ ಮರೆಯ ಕಾಯಿ' ಯಂತಿರಬಹುದು. ಆದರೆ, ಅವರಿಂದಲೇ ಎಲ್ಲ ಮೌಲ್ಯ, ಆದರ್ಶ, ಸಂಸ್ಕೃತಿ ಜೀವಂತವಾಗಿ ಮುಂದುವರಿಯು ವುದು. ಎಲ್ಲ ಸಮಾಜದಲ್ಲೂ, ಎಲ್ಲ ದೇಶದಲ್ಲೂ, ಎಲ್ಲ ರಾಜ್ಯದಲ್ಲೂ ಒಳ್ಳೆಯವರಿರುವಂತೆಯೇ ದುಷ್ಟರೂ ಇರುತ್ತಾರೆ; ಆದರೆ ಅವರ ಸಂಖ್ಯೆಯ ಅನುಪಾತದಲ್ಲಿ ಹೆಚ್ಚು ಕಡಿಮೆ ಇರಬಹುದು. ಕೇವಲ ದುಷ್ಟರನ್ನೇ ನೋಡುತ್ತ, ಎಲ್ಲರ ಬಗೆಗೂ ಅನುಮಾನಪಡುತ್ತ ಹೋಗುವುದು ಅಂತಿಮವಾಗಿ ನಮಗೆ ಹಾನಿಯನ್ನುಂಟುಮಾಡು ತ್ತದೆ. ಸಂದೇಹಪಡುವುದೇ ಅಭ್ಯಾಸವಾಗಿಬಿಟ್ಟರೆ, ಅದೇ ನಮ್ಮ ಸ್ವಭಾವವಾಗುತ್ತದೆ. ಪರಿಣಾಮವಾಗಿ, ನಾವು ಯಾರಲ್ಲೂ ಒಳ್ಳೆಯ ಗುಣವನ್ನು ಕಾಣಲಾಗದೆ, ಎಲ್ಲರನ್ನೂ ದುಷ್ಟರು, ವಂಚಕರೆಂದು ಭಾವಿಸುತ್ತೇವೆ. ಹಲವು ವೇಳೆ ಉತ್ತಮರನ್ನೂ ಅರಿಯದೆಯೇ ಕೆಟ್ಟವರೆಂದು ಭಾವಿಸಿ ದೂರಮಾಡುತ್ತೇವೆ. ಇದರಿಂದ ನಮಗಷ್ಟೇ ಅಲ್ಲ, ಇತರರಿಗೂ ಹಾನಿಯಾಗುತ್ತದೆ. ಭಗವದ್ಗೀತೆಯಲ್ಲಿ, '**ಸಂಶ ಯಾತ್ಮಾ ವಿನಶ್ಯತಿ**' ಎನ್ನಲಾಗಿದೆ. ಎಲ್ಲರಲ್ಲೂ ಸಂಶಯವನ್ನು ಕಾಣು ವವನು, ಕೊನೆಗೆ ತನ್ನಲ್ಲೇ ತಾನು ಸಂದೇಹಪಡುತ್ತಾನೆ. ಅದು ವ್ಯಕ್ತಿ ಯೊಬ್ಬನ ವಿನಾಶವೇ ಸರಿ. ವಾಸ್ತವತೆಯನ್ನು ಅರಿತುಕೊಳ್ಳಬೇಕು. ಪ್ರತಿಯೊಬ್ಬನಲ್ಲೂ ಒಳ್ಳೆಯ, ಕೆಟ್ಟ ಅಂಶಗಳೆರಡೂ ಇರುತ್ತವೆ. ಒಳ್ಳೆಯ ಅಂಶ ಹೆಚ್ಚಾಗಿದ್ದರೆ ಅವನನ್ನು ಒಳ್ಳೆಯವನೆನ್ನುತ್ತೇವೆ.

ಕೆಟ್ಟದು ಹೆಚ್ಚಿದ್ದರೆ ಕೆಟ್ಟವನೆನ್ನುತ್ತೇವೆ. ಕೆಟ್ಟವನಲ್ಲಿರುವ ಒಳ್ಳೆಯದನ್ನೂ, ಒಳ್ಳೆಯವನಲ್ಲಿರುವ ಕೆಟ್ಟದ್ದನ್ನೂ ಕಾಣುವಂತಾಗಬೇಕು. ಅದೇ ಸಮದರ್ಶನ. ಈ ರೀತಿ, ನಮ್ಮ ಗ್ರಹಿಕೆಯಲ್ಲೇ ಬದಲಾವಣೆಯಾಗಬೇಕು. ಆಗ ನಾವು 'ಸಂಶಯ ಪಿಶಾಚಿ'ಯೆಂಬ ಮನೋಭಾವವನ್ನು ತೊಲಗಿಸಿಕೊಳ್ಳಬಹುದು.

**v) ಮೇಲರಿಮೆ – ಕೀಳರಿಮೆ :** ಮಾನಸಿಕ ರೋಗವೆಂದೇ ಪರಿಗಣಿಸಲಾಗುವ ಮೇಲರಿಮೆ-ಕೀಳರಿಮೆಗಳು ಮನಸ್ಸಿನ ಮೂಲ ಭಾವನೆಯಾದ 'ಅಹಂಕಾರ'ದ ಬೇರೆ ಬೇರೆ ಬಗೆಯ ವ್ಯಕ್ತರೂಪಗಳು ಮಾತ್ರ. ತನ್ನ ಶಕ್ತಿಸಾಮರ್ಥ್ಯ, ಜ್ಞಾನ ಇವುಗಳ ಬಗ್ಗೆ ಆತ್ಮವಿಶ್ವಾಸ, ದೃಢನಂಬಿಕೆ ಇರಬೇಕಾದದ್ದೇ; ಅದು 'ಗುಣ' ಎನ್ನಿಸಿಕೊಳ್ಳುತ್ತದೆ. ಆದರೆ, ತನ್ನ ಅರಿವು, ಸಾಮರ್ಥ್ಯಗಳ ಮಿತಿಯನ್ನರಿಯದೆ, ಇತರರ ಶಕ್ತಿ-ಸಾಮರ್ಥ್ಯಗಳನ್ನೂ ಗುರುತಿಸದೆ, ತನ್ನಲ್ಲಿ ಇರುವುದಕ್ಕೂ ಮಿಗಿಲಾದ ಗುಣಗಳನ್ನು ತನ್ನಲ್ಲಿವೆಯೆಂದು ಭಾವಿಸಿದರೆ, ಅದೇ ಮೇಲರಿಮೆ. ಅಂಥವನು ಎಲ್ಲರ ಮೇಲೂ ಸವಾರಿ ಮಾಡುವ, ಎಲ್ಲರನ್ನೂ ನಿಯಂತ್ರಿಸುವ ಪ್ರವೃತ್ತಿ ಹೊಂದಿರುತ್ತಾನೆ. ಇದರ ದುಷ್ಪರಿಣಾಮ ಇತರರ ಮೇಲೆ ಉಂಟಾಗುವುದು ನಿಜ; ಆದರೆ ಎಲ್ಲರಿಗಿಂತ ಹೆಚ್ಚು ಹಾನಿಯಾಗುವುದು ತನಗೇ. ಸುಳ್ಳಿನ ಮೇಲೆ ನಿಂತಿರುವ ಆತ್ಮವಿಶ್ವಾಸ ಎಷ್ಟು ದಿನ ಉಳಿದೀತು? ತನ್ನ ಪೊಳ್ಳುತನ ಬಯಲಾಗುವ ಒಂದು ದಿನ ಬಂದೇ ಬರುವುದು. ಆಗ ಮೇಲರಿಮೆಯುಳ್ಳವನು 'ಕೀಳರಿಮೆ'ಗೆ ತುತ್ತಾಗುವ ಸಂಭವವೂ ಇದೆ. ಕೀಳರಿಮೆ ಇದಕ್ಕೆ ವಿರುದ್ಧವಾದ ಭಾವನೆ. ತನ್ನಲ್ಲೇ ಎಲ್ಲ ಸಾಮರ್ಥ್ಯಗಳಿದ್ದರೂ, 'ತಾನೂ ಏನೂ ಅಲ್ಲ; ತನಗೇನೂ ಸಾಧ್ಯವಿಲ್ಲ'ವೆಂದು ಕೊರಗುವ ಪ್ರವೃತ್ತಿಯದು. ಈ ಭಾವನೆಯಿಂದ ಅನೇಕರು ಹೊರಬರಲಾಗದೆ ಒದ್ದಾಡುತ್ತಾರೆ; ಮಾನಸಿಕ ಯಾತನೆ ಅವರ ಎಲ್ಲ ಧೈರ್ಯವನ್ನೂ ಕುಗ್ಗಿಸಿ, ಸಮಾಜವನ್ನು ಎದುರಿಸಲಾಗದಂತೆ ಮಾಡುತ್ತದೆ. ಹಲವರು ಇದರಿಂದಾಗಿ ಆತ್ಮಹತ್ಯೆಯೇ ಮೊದಲಾದ ಆಘಾತಕಾರಿ ಕೃತ್ಯಗಳನ್ನು ಎಸಗುತ್ತಾರೆ. ಮೇಲರಿಮೆ-ಕೀಳರಿಮೆ ಇವೆರಡರಿಂದಲೂ ಹೊರಬರಲು ಪ್ರಥಮ ಹೆಜ್ಜೆ : ತಮ್ಮಲ್ಲಿ ಈ ಪ್ರವೃತ್ತಿಗಳಿವೆ ಎಂಬ ಅರಿವನ್ನು ಹೊಂದುವುದು. ಆಗ ಮನಸ್ಸು ತಾನಾಗಿಯೇ ಇದರಿಂದ ಹೊರಬರಲು ಹೋರಾಡುವುದು. ಆತ್ಮವಿಶ್ವಾಸ, ಭರವಸೆ, ಸ್ಫೂರ್ತಿಯ ನುಡಿಗಳು ಅವರನ್ನು ವಾಸ್ತವತೆಯ ಕಡೆಗೆ, ಆ ಮೂಲಕ ಸಹಜತೆಯೆಡೆಗೆ ಮರಳಿಸುವುದು.

**vi) ಭಯ:** ಭಯವೆಂಬುದು ಮನುಷ್ಯನ ಮೂಲಪ್ರವೃತ್ತಿಗಳಲ್ಲಿ ಒಂದು ಎಂಬುದೇನೋ ನಿಜ. ಮಗು ಹುಟ್ಟಿದ ಕೂಡಲೇ ಬಾಹ್ಯಜಗತ್ತನ್ನು ಕಂಡು ಭಯಪಡುವುದು. ಎಲ್ಲೆಲ್ಲಿ ತೊಂದರೆ, ಆಪತ್ತು ಕಂಡುಬರುವುದೋ, ಎಲ್ಲಿ ತನ್ನ ಅಸ್ತಿತ್ವಕ್ಕೆ ಹಾನಿಯಾಗುವುದೋ, ಅಲ್ಲೆಲ್ಲ ಭಯಪಡುವುದು ಸ್ವಾಭಾವಿಕ. ಹಾವನ್ನು ಕಂಡಾಗ ಪ್ರತಿಯೊಬ್ಬರೂ ಬೆಚ್ಚಿ ಬೀಳುತ್ತಾರೆ. ಇದನ್ನು ದೋಷವೆನ್ನಲಾಗುವುದಿಲ್ಲ. ಆದರೆ ಹಲವು ಬಗೆಯ ಮಾನಸಿಕ ಯಾತನೆಗಳಿಂದ ಕೆಲವರಿಗೆ 'ನಾನಿನ್ನು ಬದುಕುವುದು ಹೇಗೆ?' ಎಂಬ ಭಯ ಮೂಡುವುದು. ಅದೇ ರೀತಿ ವಿದ್ಯಾರ್ಥಿಗಳಲ್ಲಿ ಪರೀಕ್ಷೆಯ ಭಯ, ಯುವಕರಲ್ಲಿ ಉದ್ಯೋಗ ಸಿಗಲಾರದೆಂಬ ಭಯ, ವೃದ್ಧರಲ್ಲಿ ಮೃತ್ಯುವಿನ ಭಯ, ಇವು ಒಂದಲ್ಲ ಒಂದು ಬಗೆಯ ಗೀಳಾಗಿ ಮಾರ್ಪಡುವುದು. ಒಂದು ಕ್ಷಣವೂ ನೆಮ್ಮದಿಯಿಂದಿರಲಾಗದ ಈ ಮನಃಸ್ಥಿತಿಯಿಂದಾಗಿ ಹಲವು ವೇಳೆ ನರದೌರ್ಬಲ್ಯವುಂಟಾಗುವುದು. ಅವರ ಒಟ್ಟು ಅಸ್ತಿತ್ವವೇ ಕಳಾಹೀನವಾಗುವುದು. ಗೀತೆಯ ಆರಂಭದಲ್ಲಿ ಅರ್ಜುನನಿಗೆ ಇದ್ದಕ್ಕಿದ್ದಂತೆ ಮೂಡಿಬಂದ ಭಯ ಇದೇ ರೀತಿಯದು. ಇದು ಒಂದು ಬಗೆಯ ಮಾನಸಿಕ ಅವಸ್ಥೆ; ಇದನ್ನು ತೊಡೆದುಹಾಕಲು ಅನೇಕ ಬಗೆಯ ಸಕಾರಾತ್ಮಕ ಚಿಂತನೆ, ದೈವಬಲದಲ್ಲಿ ನಂಬಿಕೆ, ಆತ್ಮವಿಶ್ವಾಸ, ಇತರರೊಡನೆ ಬೆರೆಯುವುದು ಮೊದಲಾದವನ್ನು ಮಾಡಬೇಕು. ಮನಸ್ಸು ಭಯಪಡಲು ಮೂಲಕಾರಣವೇನೇ ಇರಲಿ; ಅದಕ್ಕೆ ಪರಿಹಾರವಿದ್ದೇ ಇದೆ ಎಂದು ದೃಢವಾಗಿ ನಂಬಬೇಕು.

**೬. ಸ್ಥಿತ್ಯಂತರಗಳನ್ನು ಮೆಟ್ಟಿ ನಿಲ್ಲುವ ಬಗೆ :** ಸುದೀರ್ಘ ಕಾಲದ ಇತಿಹಾಸದಿಂದ ಮಾನವನು ಕಂಡುಕೊಂಡಿರುವ ಸತ್ಯವೇನೆಂದರೆ, ತನಗೆ ಪರಿಹರಿಸಲಾಗದ ಸಮಸ್ಯೆ ಯಾವುದೂ ಇಲ್ಲವೆಂಬುದು. ಒಂದೊಂದು ಸನ್ನಿವೇಶ, ಸಂದರ್ಭ, ಪರಿಸ್ಥಿತಿಗಳಲ್ಲಿ ಸಮಸ್ಯೆ ಒಂದೊಂದು ರೂಪವನ್ನು ಪಡೆಯಬಹುದು. ಹಲವು ಸಮಸ್ಯೆಗಳಿಗೆ ಪರಿಹಾರವಿಲ್ಲವೆಂದೇ ಕಂಡುಬರುವುದು. ಆದರೆ ಮಾನವ ತನ್ನ ಯತ್ನವನ್ನು ಎಂದಿಗೂ ಬಿಡಲಾರ. ಕ್ಯಾನ್ಸರ್ ಮುಂತಾದ ಕಾಯಿಲೆಗಳಿಂದ ಮಾನವನು ಪೂರ್ಣವಾಗಿ ಮುಕ್ತನಾಗಿಲ್ಲ. ಅನಕ್ಷರತೆ, ಬಡತನ, ಭ್ರಷ್ಟಾಚಾರ, ಕೋಮುವಾದ, ಮಾದಕದ್ರವ್ಯಗಳ ಚಟ, ಭಯೋತ್ಪಾದನೆ ಮುಂತಾದ ಸಮಸ್ಯೆಗಳನ್ನು ಮೀರಿ ಹೋಗಲಾಗಿಲ್ಲ. ಆದರೂ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಜೀವನದಲ್ಲಿ ಪರಿಹರಿಸಬಹುದಾದ ಹಲವು ಸಮಸ್ಯೆಗಳನ್ನು ತನ್ನ ಸ್ವಪ್ರಯತ್ನದಿಂದ ಬಗೆಹರಿಸಲು ಯತ್ನಿಸಬೇಕು.

ಎಲ್ಲ ಸ್ಥಿತ್ಯಂತರಗಳ ನಡುವೆ, ಎಲ್ಲ ಗಂಡಾಂತರಗಳ ನಡುವೆ ಸ್ಥಿರವಾಗಿ ನಿಲ್ಲುವುದು ಹೇಗೆ? ಧೈರ್ಯವಾಗಿ ಬದುಕನ್ನೆದುರಿಸುವುದು ಹೇಗೆ? ಎಲ್ಲ ಶಕ್ತಿಸಾಮರ್ಥ್ಯಗಳೂ ನಿಮ್ಮೊಳಗೇ ಇವೆ. ನಿಮ್ಮಲ್ಲಿ ಆತ್ಮವಿಶ್ವಾಸವಿರಬೇಕು ಅಷ್ಟೆ. ''ನೀವು ಎಂಥ ಗಂಡಾಂತರವನ್ನೂ ಮೆಟ್ಟಿ ನಿಲ್ಲಬಲ್ಲಿರಿ'' ಎನ್ನುತ್ತಾರೆ ಸ್ವಾಮೀಜಿ. ಕೇವಲ ನಮ್ಮಲ್ಲಿ ವಿಶ್ವಾಸ ಮಾತ್ರವಲ್ಲ, ನಮ್ಮನ್ನು ಕಾಪಾಡುವ ಶಕ್ತಿಯೊಂದಿದೆ ಎಂದು ಸದಾ ಧೈರ್ಯ ತಾಳುವ ದೈವೀ ನಂಬಿಕೆಯೂ ನಮಗೆ ಶಕ್ತಿ ನೀಡುವುದು. ನಮ್ಮ ಸ್ಥಿತಿಗತಿಯ ಅರಿವು, ನಮ್ಮ ಸುತ್ತಣ ಜಗತ್ತಿನಲ್ಲಾಗುವ ಬದಲಾವಣೆಗಳ ಅರಿವು, ನಾವು ತಂದುಕೊಳ್ಳಬೇಕಾದ ಗುಣಗಳ ಅರಿವು ನಮಗಿರಬೇಕು. ನಮ್ಮ ಸುತ್ತಮುತ್ತ ಹಾಗೂ ನಮ್ಮ ಒಳಗೆ ಉಂಟಾಗುತ್ತಿರುವ ಬದಲಾವಣೆಯನ್ನು ನಮ್ಮ ಏಳಿಗೆಗಾಗಿ, ಒಳಿತಿಗಾಗಿ ಬಳಸಬಹುದಲ್ಲ? ಅದಮ್ಯ ಶಕ್ತಿ, ಉತ್ಸಾಹ, ಸತ್ಯ ಹಾಗೂ ಒಳಿತಿನಲ್ಲಿ ನಂಬಿಕೆ, ನೈತಿಕ ಸ್ಥೈರ್ಯದಲ್ಲಿ ದೃಢವಾದ ಶ್ರದ್ಧೆ – ಇವೇ ನಮ್ಮನ್ನು ಮಾನಸಿಕ ಹಾಗೂ ದೈಹಿಕವಾಗಿ ಬಲಗೊಳಿಸುವ ಭಾವನೆಗಳು. ಬಾಹ್ಯ-ಆಂತರಿಕ ಸ್ಥಿತ್ಯಂತರಗಳಿಗೆ ಒಳಗಾಗದೆ, ನಮ್ಮ ಚೈತನ್ಯದ ಆಳದಿಂದ ಉಕ್ಕಿ ಬರುವ ಶಕ್ತಿಯೇ ನಮ್ಮ ಆತ್ಮಶಕ್ತಿ. ನಮ್ಮ ಅಂತರಂಗದಲ್ಲಿರುವ ಈ ಆತ್ಮನ ಸ್ವಾತಂತ್ರ್ಯ, ಆತ್ಮನಿಯಂತ್ರಣ ಹಾಗೂ ತನ್ನಲ್ಲಿ ತಾನು ಸ್ಥಿರವಾಗಿ ನಿಂತಾಗ ಉಂಟಾಗುವ ಆನಂದ – ಇವೇ ನಮ್ಮನ್ನು ಮುನ್ನಡೆಸುವ ಶಕ್ತಿಯಾಗುವುದು. ಇದುವೇ ಎಲ್ಲ ಸ್ಥಿತ್ಯಂತರಗಳ ನಡುವೆಯೂ ನಮ್ಮ ಬಾಳನ್ನು ಸುಂದರವಾಗಿ ಕಟ್ಟಿಕೊಳ್ಳುವ ನೈಜ ಸ್ಫೂರ್ತಿಯಾಗುವುದು.



# ದೇವರನ್ನು ಕಾಣಬಹುದೆ ?

ಸ್ವಾಮಿ ರಾಘವೇಶಾನಂದ

ಆಸ್ತಿಕರನ್ನೆಲ್ಲ ಕಾಡುವ ಚಿರಂತನ ಪ್ರಶ್ನೆಯಿದು. ಜೀವನದ ಸಂದಿಗ್ಧ ಪರಿಸ್ಥಿತಿಯಲ್ಲಿ ಮನುಷ್ಯ ತನ್ನೆಲ್ಲ ಪ್ರಯತ್ನಗಳನ್ನೂ ಕೈಬಿಟ್ಟಾಗ ಗೋಚರವಾಗುತ್ತದೆ, ಅವ್ಯಕ್ತ ಶಕ್ತಿಯ ಬೆಳಕು. ಇಂಥ ಅನುಭವ ಅನೇಕರಿಗಾಗಿರಬಹುದು. ಅದನ್ನು ತಮ್ಮ ಆಂತರಿಕ ಬದುಕಿಗೆ ಅನ್ವಯಿಸಿಕೊಂಡು ಸಾಧನೆ ಮಾಡಲು ಪ್ರೇರಕವಾಗುವಂತಹ ಒಂದು ಘಟನೆಯನ್ನು ವಿವರಿಸಿದ್ದಾರೆ, ಪೂಜ್ಯ ಸ್ವಾಮೀಜಿಯವರು. ಉದಕಮಂಡಲ ರಾಮಕೃಷ್ಣ ಮಠದ ಮುಖ್ಯಸ್ಥರಾಗಿರುವ ಅವರು ಉತ್ತಮ ವಾಗ್ಮಿಗಳು ಮತ್ತು ಉತ್ತಮ ಬರಹಗಾರರು. ಅವರು ಅನೇಕ ಮೌಲಿಕ ಕೃತಿಗಳನ್ನು ರಚಿಸಿದ್ದಾರೆ.

ಇದು ಗುರುರಾಜ ಕರ್ಜಗಿಯವರು ಬೆಳಗಾವಿಯಲ್ಲಿ ವಿದ್ಯಾರ್ಥಿಗಳ ಸಮ್ಮೇಳನದಲ್ಲಿ ಮಾಡಿದ ಭಾಷಣದ ಸಾರಾಂಶ.

ಗುರುರಾಜ ಕರ್ಜಗಿಯವರು ಕರ್ನಾಟಕದವರಿಗೆ ಪರಿಚಿತರು. ವಿದ್ಯಾಭ್ಯಾಸ ಕ್ಷೇತ್ರದಲ್ಲಿ ಪ್ರಾಧ್ಯಾಪಕರಾಗಿ, ಪ್ರಾಂಶುಪಾಲರಾಗಿ ಬಹಳ ವರ್ಷಗಳ ಕಾಲ ಸೇವೆ ಸಲ್ಲಿಸಿ ಪ್ರಸ್ತುತ ಉಪಾಧ್ಯಾಯರುಗಳನ್ನು ತರಬೇತಿಗೊಳಿಸುವ ತಮ್ಮದೇ ಒಂದು ಸಂಸ್ಥೆಯನ್ನು ನಡೆಸುತ್ತಾ ವಿದ್ಯಾಸೇವೆಯಲ್ಲಿ ತಮ್ಮನ್ನು ಸತತ ತೊಡಗಿಸಿಕೊಂಡಿದ್ದಾರೆ. ಅವರ ಭಾಷೆಯಲ್ಲೇ ಇದನ್ನು ಬರೆಯುತ್ತೇನೆ:

ಇದು ಜನವರಿ ೧, ೨೦೦೯ ರಂದು ನಡೆದ ಘಟನೆ. ನಾನು ಅಂದು ಬರೋಡದಲ್ಲಿದ್ದೆ. ಈ ಘಟನೆ ನನ್ನ ಹೃದಯವನ್ನು ಸ್ಪರ್ಶಿಸಿತು. ಬಹುಶಃ ನಿಮ್ಮ ಹೃದಯವನ್ನೂ ಸ್ಪರ್ಶಿಸುತ್ತದೆ. ನಾನು ಬರೋಡಾದ ದೊಡ್ಡ ಕಾರ್ಡಿಯಾಕ್ ಸರ್ಜನ್ನರ ಅತಿಥಿಯಾಗಿದ್ದೆ. ಅವರ ಹೆಸರು ಶೈಲೇಶ ಮೆಹ್ತಾ. ಅವರ ಬಳಿ ಅಪಾಯಿಂಟ್‌ಮೆಂಟ್ ಪಡೆಯಲು ಬಹುಶಃ ಒಂದು ತಿಂಗಳಾದರೂ ಕಾಯಬೇಕು. ಅದೂ ಬಹಳ ಕ್ಲಿಷ್ಟವಾದ ಸರ್ಜರಿಯಾದರೆ ಮಾತ್ರ ಅವರು ಮಾಡುತ್ತಾರೆ. ಇಲ್ಲದಿದ್ದಲ್ಲಿ ಕಿರಿಯ ವೈದ್ಯರುಗಳಿಗೆ ವಹಿಸುತ್ತಾರೆ. ಆದರೆ ಎಲ್ಲದರಲ್ಲೂ ಅವರ ಮೇಲ್ವಿಚಾರಣೆ ಇರುತ್ತದೆ. ಅವರು ನನ್ನ ಆಪ್ತ ಸ್ನೇಹಿತರು. ಅಂದು ಸಂಜೆ, ಅಂದರೆ ಹೊಸ ವರ್ಷದ ಮೊದಲ ದಿನ ನಾವಿಬ್ಬರೂ ಒಂದು ಪ್ರಸಿದ್ಧ ಹೋಟೆಲಿನಲ್ಲಿ ರಾತ್ರಿಯ ಊಟದ ಸಮಯ ಭೇಟಿಯಾಗಿ, ಮಾತನಾಡುತ್ತ ಕುಳಿತಿದ್ದೆವು. ಅವರು ಮಾತು ಆರಂಭಿಸಿದರು, ''ಇತ್ತೀಚೆಗೆ ನನ್ನ ಜೀವನದಲ್ಲಿ ಒಂದು ಘಟನೆ ನಡೆಯಿತು. ಅದು ನನ್ನ ಜೀವನವನ್ನೇ ಬದಲಾಯಿಸಿಬಿಟ್ಟಿತು.'' ಅವರೇನೂ ಉದ್ವೇಗಗಳಿಗೆ ಬಲಿಯಾಗುವ ವ್ಯಕ್ತಿಯಲ್ಲ. ಪ್ರತಿದಿನ ಆಪರೇಶನ್‌ಗಾಗಿ ಹತ್ತು ಹೃದಯಗಳನ್ನಾದರೂ ಕತ್ತರಿಸಿ, ಮತ್ತೆ ಹೊಲಿಯುವ ವ್ಯಕ್ತಿ. ಅವರು ಹೇಳಿದರು, ''ಡಿಸೆಂಬರ್ ೨೧ ರಂದು, ಬೆಳಿಗ್ಗೆ ಸುಮಾರು ೯ ಘಂಟೆಗೆ ಇಬ್ಬರು ದಂಪತಿಗಳು, ಸುಮಾರು ಆರೇಳು ವರ್ಷದ ಹುಡುಗಿಯೊಂದಿಗೆ, ಮೊದಲೇ ನಿಗದಿಗೊಂಡಿದ್ದಂತೆ ಬಂದರು. ಕೈಯಲ್ಲಿ ಆ ಮಗುವಿನ ರಿಪೋರ್ಟ್ ಇತ್ತು. ಜ್ಯೂನಿಯರ್ ವೈದ್ಯರುಗಳೆಲ್ಲಾ ನೋಡಿ, ತಮ್ಮ ಅಭಿಪ್ರಾಯವನ್ನು ಬರೆದಿದ್ದರು. ಪಾಪ, ಆ ಹುಡುಗಿಯ ಹೃದಯದಲ್ಲಿ ಬಹಳ ಬ್ಲಾಕ್‌ಗಳಿವೆ. ಬಹಳ ಕ್ಲಿಷ್ಟಕರವಾದ ಆಪರೇಶನ್ ಮಾಡಬೇಕಾಗಿತ್ತು.'' ನುರಿತ ವೈದ್ಯರಾದುದರಿಂದ ಆ ತಪಾಸಣೆಯ ಫಲಿತಾಂಶಗಳನ್ನೆಲ್ಲಾ ನೋಡಿದ ತಕ್ಷಣ ಆ ಮಗುವನ್ನು ಬದುಕಿಸುವುದು ಕಷ್ಟ. ಇನ್ನು ಮೂರು ತಿಂಗಳು ಬದುಕಿದ್ದರೆ ಹೆಚ್ಚು ಎನ್ನಿಸಿತು. ಅದನ್ನು ತಂದೆತಾಯಿಯರಿಗೆ ವಿವರಿಸಿ, ''ನೋಡಿ, ಶಸ್ತ್ರಚಿಕಿತ್ಸೆ ತುಂಬಾ ಕಷ್ಟ. ಆಪರೇಷನ್ ಥಿಯೇಟರಿನಲ್ಲೇ, ಟೇಬಲ್ಲಿನ ಮೇಲೆ ಮಗು ಪ್ರಾಣ ಕಳೆದುಕೊಳ್ಳಬಹುದು. ಆದರೆ ಅದು ಸರಿಯಾಗಿ ಬಿಟ್ಟರೆ ಮಗುವಿಗೆ ಪೂರ್ಣ ಆಯುಸ್ಸಿರುತ್ತದೆ. ತೀರ್ಮಾನ ನಿಮ್ಮದು'' ಎಂದರು. ತಂದೆ ತಾಯಿ ಬಹಳ ಹೊತ್ತು ಮಾತಾಡಿ ಕೊನೆಗೆ ನಿರ್ಧಾರಕ್ಕೆ ಬಂದು, ''ದಯವಿಟ್ಟು ಶಸ್ತ್ರ ಚಿಕಿತ್ಸೆ ಮಾಡಿ, ಡಾಕ್ಟರ್'' ಎಂದರು. ಪುಟ್ಟ ಹುಡುಗಿಯನ್ನು ಆಸ್ಪತ್ರೆಗೆ ಸೇರಿಸಲಾಯಿತು. ಸುಮಾರು ಐದಾರು ದಿನ ಬೇಕಾದ ಪರೀಕ್ಷೆಗಳನ್ನೆಲ್ಲಾ ಮಾಡಿದರು. ಪ್ರತಿದಿನ ತಾಯಿ ದೇವರಲ್ಲಿ ಪ್ರಾರ್ಥಿಸುತ್ತಿದ್ದಳು. ದೇವಸ್ಥಾನದಿಂದ ತಂದ ವಿಭೂತಿ

ಯನ್ನು ಮಗುವಿನ ಹಣೆಗಿಡುತ್ತಿದ್ದಳು ಮತ್ತು ಮಗಳಿಗೆ ಹೇಳುತ್ತಿದ್ದರು, ''ನೀನೂ ಪ್ರಾರ್ಥಿಸಿಕೋ, ಮಕ್ಕಳ ಪ್ರಾರ್ಥನೆಯನ್ನು ಖಂಡಿತ ಭಗವಂತನು ಕೇಳುತ್ತಾನೆ.'' ಮಗು ತಾಯಿಯ ಮಾತಿನಲ್ಲಿ ಪೂರ್ಣ ವಿಶ್ವಾಸವಿಟ್ಟು ಪ್ರಾರ್ಥಿಸುತ್ತಿತ್ತು.

ಶಸ್ತ್ರ ಚಿಕಿತ್ಸೆಯ ದಿನ ಮಗುವನ್ನು ಆಪರೇಷನ್ ಟೇಬಲ್ ಮೇಲೆ ಮಲಗಿಸಲಾಯಿತು. ಡಾ. ಮೆಹ್ತಾರ ಸಹಾಯಕರು ಎಲ್ಲಾ ಏರ್ಪಾಡುಗಳನ್ನು ಮಾಡುತ್ತಿದ್ದರು. ಡಾ. ಮೆಹ್ತಾ ಆಪರೇಷನ್ನಿನ ಉಡುಪಿನೊಡನೆ ಬಂದರು. ಮಗು ಅವರನ್ನು ನೋಡಿ ನಕ್ಕಿತು. ಡಾ. ಮೆಹ್ತಾ ಅವರಿಗೆ ಎದೆ ಚುಳ್ ಎಂದಿತು. ಪಾಪ, ಮಗು ನಿಜವಾಗಿಯೂ ಉಳಿದುಕೊಳ್ಳುವಳೆ? ಮಗು, ''ಅಂಕಲ್, ನಿಮ್ಮನ್ನು ಒಂದು ಪ್ರಶ್ನೆ ಕೇಳಲೆ?'' ಎಂದಿತು. ''ಪ್ರಶ್ನೆಯೆ? ಏನು ಪ್ರಶ್ನೆಯಮ್ಮಾ?'' ಎಂದರು ಡಾಕ್ಟರ್. ''ಏನಿಲ್ಲ, ನೀವು ನನಗೆ ಇಂದು ಓಪನ್‌ಹಾರ್ಟ್ ಸರ್ಜರಿ ಮಾಡುತ್ತೀರಂತೆ, ಅಂದರೆ ನನ್ನ ಹೃದಯದ ಹೊರಭಾಗವನ್ನು ಕತ್ತರಿಸುತ್ತೀರಾ?'' ಮೆಹ್ತಾರವರಿಗೆ ಏನು ಹೇಳಬೇಕೆಂದು ತಿಳಿಯಲಿಲ್ಲ. ''ಹೆದರಬೇಡಮ್ಮಾ, ನಿನಗೆ ನಾವು ಸಾಕಷ್ಟು ಔಷಧಿ ಕೊಟ್ಟಿರುತ್ತೇವೆ. ನಿನಗೆ ಸ್ವಲ್ಪವೂ ನೋವು ಗೊತ್ತಾಗುವುದಿಲ್ಲ'' ಎಂದರು. ಆ ಮಗು, ''ನನಗೆ ಭಯವಿಲ್ಲ ಡಾಕ್ಟರ್, ಆದರೆ ನನ್ನ ಪ್ರಶ್ನೆಗೆ ನೀವು ಉತ್ತರ ಹೇಳಲೇ ಇಲ್ಲವಲ್ಲ?'' ಎಂದಿತು. ''ಏನಮ್ಮಾ ನಿನ್ನ ಪ್ರಶ್ನೆ?'' ಎಂದರು ಡಾಕ್ಟರ್. ''ನೀವು ನನ್ನ ಹೃದಯವನ್ನು ಸಂಪೂರ್ಣವಾಗಿ ತೆಗೆಯುವಿರಾ? ಏಕೆಂದರೆ ನಮ್ಮ ತಾಯಿ ಹೇಳುತ್ತಾರೆ, ಭಗವಂತ ನಮ್ಮ ಹೃದಯದ ಒಳಗಡೆ ಇರುತ್ತಾನಂತೆ. ದಯವಿಟ್ಟು ನನ್ನ ಹೃದಯದಲ್ಲೂ ಇದ್ದಾನೆಯೇ ಎಂದು ನೋಡಿ. ಅವನು ಅಲ್ಲಿದ್ದರೆ ಅವನನ್ನು ನೋಡಿ, ನನ್ನ ಆರೋಗ್ಯ ಸರಿಹೋದಾಗ ಅವನು ನೋಡಲು ಹೇಗಿದ್ದಾನೆ ಎಂದು ನನಗೆ ವಿವರಿಸಿ. ನನಗೆ ತಿಳಿಯಲು ತುಂಬಾ ಕುತೂಹಲವಿದೆ.'' ಡಾ. ಮೆಹ್ತಾ ಬೆಚ್ಚಿಬಿದ್ದರು. ಅವರಿಗೆ ಏನು ಹೇಳಬೇಕೆಂದು ತೋಚಲಿಲ್ಲ. ''ಸರಿ ಮಗು, ತಿಳಿಸುತ್ತೇನೆ'' ಎಂದಷ್ಟೇ ಹೇಳಿದರು. ಅವರು ಚಿಕಿತ್ಸೆ ಶುರು ಮಾಡಿದರು. ಸುಮಾರು ೪೫ ನಿಮಿಷಗಳಾಗಿರಬಹುದು. ಆದರೆ ಒಂದು ತೊಟ್ಟು ರಕ್ತವೂ ಹೃದಯಕ್ಕೆ ಹರಿಯಲಿಲ್ಲ. ಡಾ. ಮೆಹ್ತಾಗೆ ತುಂಬಾ ನಿರಾಶೆಯಾಯಿತು. ಪಲ್ಸ್ ರೇಟ್ ಕಡಿಮೆಯಾಗಲು ಶುರುವಾಯಿತು. ಬರೀ ಯಂತ್ರದ ಸಹಾಯದಿಂದ ಮಗುವಿನ ಹೃದಯ ಕೆಲಸ ಮಾಡುತ್ತಿತ್ತು. ಬಿ.ಪಿ. ಕೂಡ ಕಡಿಮೆಯಾಗಿತ್ತು. ಕೊನೆಗೆ ಡಾ. ಮೆಹ್ತಾ ಹೇಳಿದರು, ''ಮಗು ಬದುಕುವುದಿಲ್ಲ.'' ತನ್ನ ಸಹಾಯಕರಿಗೆ ಹೇಳಿದರು, ''ಹೃದಯ ಭಾಗವನ್ನು ಮತ್ತೆ ಹೊಲಿದುಬಿಡಿ, ಯಂತ್ರಗಳನ್ನೆಲ್ಲಾ ಆಫ್ ಮಾಡಿಬಿಡಿ.'' ಡಾಕ್ಟರ್ ಮನಸ್ಸಿಗೆ ಆ ಮಗುವಿನ ಮಾತುಗಳು ನೆನಪಿಗೆ ಬಂದಿತು, ''ಹೃದಯವನ್ನು ತೆರೆದಾಗ ಒಳಗೆ ದೇವರಿದ್ದಾನೆಯೇ ನೋಡಿರಿ.'' ಮೆಹ್ತಾ ನನಗೆ ಈ ವಿಷಯವನ್ನು ಹೇಳುತ್ತಿದ್ದಾಗ ಅವರ ಕಣ್ಣಿನಲ್ಲಿ ನೀರು ಸುರಿಯುತ್ತಿತ್ತು. ಅವರು ಹೇಳಿದರು, ''ನೋಡಿ ಕರ್ಜಗಿಯವರೆ, ನನ್ನ ಜೀವನದಲ್ಲಿ ಬೇಕಾದಷ್ಟು ಶಸ್ತ್ರಚಿಕಿತ್ಸೆ ಮಾಡಿದ್ದೇನೆ. ಅಂದು ನನ್ನ ಜೀವನದಲ್ಲಿ ಪ್ರಥಮ ಬಾರಿಗೆ ಕೈಮುಗಿದು, 'ಭಗವಂತ, ನನ್ನ ವೈದ್ಯಕೀಯದ ನಿಪುಣತೆಯೆಲ್ಲ ನಿಷ್ಫಲವಾಗಿದೆ. ಈ ಮಗುವನ್ನು ಬದುಕಿಸಲಾಗುತ್ತಿಲ್ಲ, ಆದರೆ ಈ ಮಗು ಮತ್ತು ಅವಳ ತಾಯಿ ನೀನು ಈ ಮಗುವಿನ ಹೃದಯದಲ್ಲಿ ಇದ್ದೀಯಾ ಎಂದು ನಂಬಿದ್ದಾರೆ. ಹಾಗೆ ನೀನೇನಾದರೂ ಇರುವುದಾದರೆ ಆ ಮಗುವನ್ನು ಬದುಕಿಸಿಬಿಡು.' ನಾನು ಪಕ್ಕದಲ್ಲಿದ್ದ ನರ್ಸ್‌ಗೆ ನನ್ನ ಕಣ್ಣಿನಿಂದ ಕನ್ನಡಕವನ್ನು ತೆಗೆದು, ಕಣ್ಣುಗಳನ್ನು ಒರೆಸಲು ಹೇಳಿದೆ. ಅವಳು ಆಶ್ಚರ್ಯದಿಂದ ಹಾಗೇ ಮಾಡಿದಳು. ಏಕೆಂದರೆ ನಾನು ಎಂದೂ ಅತ್ತೇ ಇರಲಿಲ್ಲ. ಆ ಸಮಯಕ್ಕೆ ನನ್ನ ಪಕ್ಕದಲ್ಲಿದ್ದ ಸಹೋದ್ಯೋಗಿ ನನ್ನ ಭುಜ ಮುಟ್ಟಿ, 'ಸರ್, ಹೃದಯಕ್ಕೆ ನಿಧಾನವಾಗಿ ರಕ್ತ ಹರಿಯುತ್ತಿದೆ' ಎಂದ. ನಾನು ಪವಾಡಗಳನ್ನು ನಂಬುವುದಿಲ್ಲ , ದೇಹದ ಕ್ರಿಯೆಯಲ್ಲೇ ಏನೋ ಬದಲಾವಣೆಯಾಗಿರಬೇಕು ಎಂದುಕೊಂಡು ತಕ್ಷಣ ಶಸ್ತ್ರಚಿಕಿತ್ಸೆಯನ್ನು ಮುಂದುವರೆಸಲು ನಿರ್ಧರಿಸಿದೆ. ಸುಮಾರು ಐದು ಘಂಟೆಗಳ ಕಾಲ ಶಸ್ತ್ರಚಿಕಿತ್ಸೆ ಮಾಡಿದೆವು. ಕೊನೆಗೂ ಮಗು ಬದುಕಿ ಉಳಿದುಕೊಂಡಿತು. ಮಗು ಇನ್ನೂ ಆಸ್ಪತ್ರೆಯಲ್ಲೇ ಚೇತರಿಸಿಕೊಳ್ಳುತ್ತಿದೆ. ನಾನು ಅವಳು ಮಲಗಿರುವ ಸಮಯದಲ್ಲೆಲ್ಲಾ ಹೋಗಿ ನೋಡಿ ಬರುತ್ತಿದ್ದೇನೆ. ಅವಳೇನಾದರೂ ನನ್ನನ್ನು ನೋಡಿದರೆ, 'ದೇವರನ್ನು ನೋಡಿದಿರಾ? ಅವನು ಹೇಗಿದ್ದಾನೆ? ಹೇಗೆ ಕಾಣುತ್ತಾನೆ?' ಎಂದು ಕೇಳುತ್ತಾಳೆ. ನನ್ನ ಬಳಿ ಉತ್ತರವಿಲ್ಲ. ಆದರೆ ಈ ಘಟನೆಯ ನಂತರ ನನಗೆ ದೇವರಲ್ಲಿ ನಂಬಿಕೆಯಿಲ್ಲ ಎಂದು ಹೇಳುವ ಧೈರ್ಯವಿಲ್ಲ'' ಎಂದರು.

''ಆಗ ನಾನು ಅವರಿಗೆ ಹೇಳಿದೆ, 'ಮಗುವಿಗೆ ಹೇಳಿ, ದೇವರನ್ನು ನೋಡುವುದು ಕಷ್ಟವಮ್ಮಾ, ಆದರೆ ಅವನ ಇರುವಿಕೆಯನ್ನು ಅನುಭವಿಸಬಹುದು. ನಾನು ಅನುಭವಿಸಿದ್ದೇನೆ, ನೀನೂ ಅನುಭವಿಸಬಹುದು. ಪ್ರತಿಯೊಬ್ಬರೂ ಅನುಭವಿಸಬಹುದು' ಎಂದು.''

ನಿಮಗೆ ಗೊತ್ತೆ ? ಈ ಅನುಭವ ಮೆಹ್ತಾ ಅವರ ಜೀವನವನ್ನೇ ಬದಲಾಯಿಸಿದೆ. ಇಂದು ಅವರು ಅಪರೇಷನ್ ಥಿಯೇಟರಿನಲ್ಲಿ ಒಂದು ದೇವರ ಭಾವಚಿತ್ರವನ್ನು ಹಾಕಿದ್ದಾರೆ. ಮೊದಲು ಅವರಿಗೆ ತಮ್ಮ ಸಾಮರ್ಥ್ಯ ಹಾಗೂ ಅನುಭವದ ಮೇಲೆ ನಂಬಿಕೆಯಿತ್ತು. ಇಂದು ಅವರು ಪ್ರತಿಯೊಂದು ಶಸ್ತ್ರಚಿಕಿತ್ಸೆಗೆ ಮುಂಚೆ ಆ ಭಾವಚಿತ್ರದ ಮುಂದೆ ನಿಂತು, 'ನಾನೊಬ್ಬ ಸಾಮಾನ್ಯ ವ್ಯಕ್ತಿ, ನನ್ನಲ್ಲಿ ಯಾವ ಶಕ್ತಿ, ಜ್ಞಾನವಿದೆಯೋ ಅದು ನಿನ್ನ ಕೃಪೆ, ಅನುಗ್ರಹ ಇದ್ದಲ್ಲಿ ಮಾತ್ರ ಸಫಲವಾಗುತ್ತದೆ' ಎನ್ನುತ್ತಾರೆ. ಡಾ. ಮೆಹ್ತಾರಿಗೆ ತಮ್ಮ ೬೯ನೇ ವಯಸ್ಸಿನಲ್ಲಿ ಈ ವಿಷಯ ಅನುಭವಕ್ಕೆ ಬಂತು. ಈ ನಂಬಿಕೆ ೬ ವರ್ಷದ ಹುಡುಗಿಗೆ ಹೇಗೆ ಬಂದಿತು? ಕಾರಣ ಅವಳ ತಾಯಿ ಅವಳಿಗೆ ಮತ್ತೆ ಮತ್ತೆ ಹೇಳಿ ನಂಬಿಕೆ ಹುಟ್ಟಿಸಿದ್ದಳು. ನಾನು ಇದನ್ನು ಇಲ್ಲಿ ಏಕೆ ಹೇಳುತ್ತಿದ್ದೇನೆ ಎಂದರೆ ತಂದೆ ತಾಯಿಯರ ಹಾಗೂ ಉಪಾಧ್ಯಾಯರ ಮೇಲೆ ದೊಡ್ಡ ಜವಾಬ್ದಾರಿ ಇದೆ. ಸುಮ್ಮನೆ ಮಕ್ಕಳು ಈಗಿನ ಕಾಲದಲ್ಲಿ ನಮ್ಮ ಭಾರತೀಯ ಸಂಸ್ಕೃತಿಯಿಂದ ದೂರವಾಗುತ್ತಿದ್ದಾರೆ ಎಂದು ದೂರುವುದರಿಂದ ಪ್ರಯೋಜನವಿಲ್ಲ. ನೀವು ಒಬ್ಬ ಅಂಪೈರ್ ನಂತೆ ನಿಂತು ಆ ಹುಡುಗ ಔಟ್ ಅಂದು ಹೇಳಲಾಗುವುದಿಲ್ಲ. ನೀವು ಆ ಹುಡುಗ ಔಟ್ ಆಗದಂತೆ ನೋಡಿಕೊಳ್ಳುವ ಜವಾಬ್ದಾರಿ ನಿಮ್ಮ ಮೇಲಿದೆ. ಪೋಷಕರು ಹಾಗೂ ತಂದೆ ತಾಯಿಯರ ಮೇಲೆ ತಮ್ಮ ಮಕ್ಕಳಿಗೆ ಒಳ್ಳೆಯ ಸಂಸ್ಕೃತಿಯನ್ನು ಕೊಡುವ ಜವಾಬ್ದಾರಿಯಿದೆ. ❁

### ವಿಶೇಷ ಲೇಖನ



# ಶಿಕ್ಷಣ, ಶಿಕ್ಷಕರು ಮತ್ತು ಪೋಷಕರು

ಆಧುನಿಕ ಸಂದರ್ಭದಲ್ಲಿ ಶಿಕ್ಷಣ ಕ್ಷೇತ್ರವು ಎದುರಿಸುತ್ತಿರುವ ಸವಾಲು, ಸಮಸ್ಯೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು, ವಿದ್ಯಾಭ್ಯಾಸದಲ್ಲಿ ಪಾಲಕರ ಹಾಗೂ ಶಿಕ್ಷಕರ ಮಹತ್ವ ಹಾಗೂ ಅವರ ಕರ್ತವ್ಯವನ್ನು ಲೇಖಕರು ಇಲ್ಲಿ ವಿವರಿಸಿದ್ದಾರೆ. ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದಲ್ಲಿ ಸಂಖ್ಯಾಶಾಸ್ತ್ರದ ಪ್ರಾಧ್ಯಾಪಕರಾಗಿದ್ದು ನಿವೃತ್ತರಾಗಿರುವ ಅವರು, ನಾಲ್ಕು ದಶಕಗಳಿಗೂ ಹೆಚ್ಚು ಕಾಲದ ಬೋಧನೆ, ಸಂಶೋಧನೆಯ ಅನುಭವವನ್ನು ಹೊಂದಿದ್ದಾರೆ. ಅವುಗಳ ಹಿನ್ನೆಲೆಯಲ್ಲಿ ಪ್ರಸ್ತುತ ವಿಷಯವನ್ನು ಕುರಿತು ತಮ್ಮ ಚಿಂತನೆಗಳನ್ನು ಇಲ್ಲಿ ಪ್ರಸ್ತುತಪಡಿಸಿದ್ದಾರೆ.

**ಡಾ. ವಸಂತ ಕುಮಾರ್**

ಸ್ವಾತಂತ್ರ್ಯಪೂರ್ವದ ಭಾರತದಲ್ಲಿ ಶಿಕ್ಷಣ ಎಲ್ಲರಿಗೂ ದೊರೆಯುತ್ತಿರಲಿಲ್ಲ. ಶ್ರೀಮಂತರಿಗೆ, ಪ್ರತಿಷ್ಠಿತರಿಗೆ, ಮತ್ತು ಕೆಲವು ಪ್ರಭಾವಿ ವರ್ಗದವರಿಗೆ ಅದು ಲಭ್ಯವಿತ್ತು. ಸ್ವಾತಂತ್ರ್ಯಾನಂತರ ಕ್ರಮೇಣ ಸಮಾಜದ ಎಲ್ಲ ವರ್ಗದವರಿಗೂ ಶಿಕ್ಷಣ ಸಂಸ್ಥೆಯ ಬಾಗಿಲುಗಳು ತೆರೆಯಲಾರಂಭಿಸಿದುವು. ಈಗ ಶಿಕ್ಷಣ ಹೆಚ್ಚು ವ್ಯಾಪಕವಾಗತೊಡಗಿದೆ. ಶಿಕ್ಷಣ ಸಂಸ್ಥೆಗಳು ಹೆಚ್ಚಾಗಿವೆ. ಶಿಕ್ಷಣ ಸಾಧನಗಳು ಬಹುವಾಗಿ ವೈವಿಧ್ಯಮಯವಾಗಿವೆ, ಹೆಚ್ಚು ತಾಂತ್ರಿಕವಾಗಿವೆ. ಖಾಸಗಿ ಶಿಕ್ಷಣ ಸಂಸ್ಥೆಗಳು ಹೇರಳವಾಗಿದ್ದು ಸಾರ್ವಜನಿಕರನ್ನು, ತಂದೆತಾಯಿಗಳನ್ನು ದಂಗುಬಡಿಸುವಂತೆ ವೈಭವೋಪೇತವಾಗಿ ತಲೆಯೆತ್ತಿ ನಿಂತಿವೆ. ಅನೇಕ ಖಾಸಗಿ ವಿಶ್ವವಿದ್ಯಾನಿಲಯಗಳೇ ಬಂದಿವೆ. ಇವು ಗಳಿಸುತ್ತಿರುವ ಆದಾಯವನ್ನು ಗಮನಿಸಿದರೆ, ಸರ್ಕಾರ ಮುಂದೆ ಶಿಕ್ಷಣ ಕ್ಷೇತ್ರವನ್ನು ಒಂದು ವಾಣಿಜ್ಯ ಉದ್ಯಮವನ್ನಾಗಿ ಪರಿಗಣಿಸಬೇಕೆಂಬ ಕೂಗು ಕೇಳಿಬರುವುದೋ ಏನೋ!

### ಶಾಲಾಶಿಕ್ಷಣ

ಇಂದು, ಎಂದಿಗಿಂತ ಹೆಚ್ಚಾಗಿ ಗ್ರಾಮೀಣ ಪ್ರದೇಶಗಳಲ್ಲಿಯೂ ಕೂಡ ತಾಯಿತಂದೆಯರು ಶಿಕ್ಷಣದ ಆವಶ್ಯಕತೆಯನ್ನು ಮನಗಾಣುತ್ತಿರುವರು; ಶಿಕ್ಷಣಕ್ಕೆ ಆದ್ಯತೆ ನೀಡುತ್ತಿರುವರು. ತಮಗೆ ಎಷ್ಟೇ ಕಷ್ಟವಾದರೂ ತಮ್ಮ ಮಕ್ಕಳಿಗೆ ಒಳ್ಳೆಯ ಶಿಕ್ಷಣವನ್ನು ಆದಷ್ಟು ಹೆಚ್ಚು ಕೊಡಬೇಕೆಂದು ಶ್ರಮಿಸುತ್ತಿರುವುದನ್ನು ಕಾಣಬಹುದು. ಇಂದು ಗ್ರಾಮಾಂತರ ಪ್ರದೇಶಗಳಲ್ಲಿ ಸ್ತ್ರೀ ಶಿಕ್ಷಣವು ಕಡಿಮೆ ಪ್ರಮಾಣದಲ್ಲಿ ಕಾಣುತ್ತಿದೆ. ಆದರೂ, ಸ್ವಾತಂತ್ರ್ಯೋತ್ತರ ಭಾರತದಲ್ಲಿ ಇದೊಂದು ಪ್ರಮುಖ ಬೆಳವಣಿಗೆಯಾಗಿದೆ. ಬಹು ಜನಸಂಖ್ಯೆ ಇರುವ ನಮ್ಮ ದೇಶದಲ್ಲಿ ಶಾಲಾಶಿಕ್ಷಣ ಇನ್ನೂ ವ್ಯಾಪಕವಾಗಿ ಹರಡಬೇಕಾಗಿದೆ. ಆಹಾರದ ಕೊರತೆಯನ್ನು ಬಿಟ್ಟರೆ ಬಹುಶಃ ಅನಕ್ಷರತೆ ಅಥವಾ ಶಿಕ್ಷಣದ ಕೊರತೆಯೇ ನಮ್ಮ ಅನೇಕ ಸಮಸ್ಯೆಗಳಿಗೆ ಮೂಲಕಾರಣವಾಗಿದೆ. ಆಹಾರವಾಗಲಿ ಶಾಲಾಶಿಕ್ಷಣವಾಗಲಿ, ಮೊದಲು ವಿಸ್ತಾರವಾಗಿ ಹರಡಿ ಅದರ ಪ್ರಮಾಣ ಹೆಚ್ಚಾಗಬೇಕಾಗಿದೆ. ನಂತರ ಅದರ ಗುಣಮಟ್ಟ ಉತ್ತಮವಾಗುವುದಕ್ಕೆ ಬೇಕಾದ ಪ್ರಯತ್ನವನ್ನು ಮಾಡಬೇಕಾಗುವುದು. ಮೊದಲು ಪ್ರಮಾಣ, ನಂತರ ಗುಣ. ಮೊದಲು ವಿಸ್ತಾರ, ನಂತರ ಆಳ. ನಾವು ಈಗ ಮೊದಲನೆಯ ಹಂತದಲ್ಲಿದ್ದೇವೆ.

### ಶಾಲಾಶಿಕ್ಷಣ – ಶ್ರೀಸಾಮಾನ್ಯರ ದೃಷ್ಟಿ

ಶಾಲಾ ವಿದ್ಯಾಭ್ಯಾಸ ಮುಗಿಯುತ್ತಿದ್ದಂತೆ ವಿದ್ಯಾರ್ಥಿಗಳು ಮತ್ತು ತಂದೆತಾಯಿಗಳು ನೌಕರಿಯ ಬಗ್ಗೆ ಕಾತರರಾಗುವರು. ಜೀವನೋಪಾಯಕ್ಕೆ ಹಣ ಬೇಕು. ಅದಕ್ಕಾಗಿ ಶಾಲಾವಿದ್ಯಾಭ್ಯಾಸ ಬೇಕು.

ಇತ್ತೀಚಿನ ದಿನಗಳಲ್ಲಿ ಯಾವ ಪದವಿ ಹೆಚ್ಚು ಹಣ ಗಳಿಕೆಗೆ ಅವಕಾಶ ನೀಡುವುದೋ ಆ ಪದವಿಯ ಕಡೆ ವಿದ್ಯಾರ್ಥಿಗಳು ಮುನ್ನುಗ್ಗುತ್ತಿರುವುದನ್ನು ನೋಡಬಹುದು. ಅನೇಕ ಯುವಕರಿಗೆ ನೌಕರಿ ಬೇಕಾಗಿರುವುದು ಕೇವಲ ಜೀವನೋಪಾಯಕ್ಕಲ್ಲ, ಪ್ರಪಂಚದ ವೈಭೋಗ ವಿಲಾಸಗಳನ್ನು ಅನುಭವಿಸುವುದಕ್ಕೆ. ಏಕೆಂದರೆ, ಜೀವನಕ್ಕೆ ಆವಶ್ಯಕವಾದುದನ್ನು ತಂದೆತಾಯಿಗಳು ಮಕ್ಕಳಿಗಾಗಿ ಆಗಲೇ ಗಳಿಸಿಟ್ಟಿರುವರು. ಇದೆಲ್ಲ ಸಹಜ. ಪ್ರಾರಂಭದಲ್ಲಿ ಅನಿವಾರ್ಯ, ಆಕರ್ಷಕ–ಸತ್ಯ. ಅನೇಕ ಬಡ ಕುಟುಂಬಗಳ, ವಿಶೇಷವಾಗಿ ಗ್ರಾಮೀಣ ಪ್ರದೇಶಗಳಲ್ಲಿ ತಾಯಿತಂದೆಯರ ಆರ್ಥಿಕ ಪರಿಸ್ಥಿತಿ ಮಕ್ಕಳ ಗಳಿಕೆಯಿಂದ ಸುಧಾರಿಸಲ್ಪಡುತ್ತಿದೆ. ಇದು ಆವಶ್ಯಕ ಮತ್ತು ಅಪೇಕ್ಷಿತ.

### ಶಾಲಾಶಿಕ್ಷಣದ ಗುರಿ

ನೌಕರಿ, ಗಳಿಕೆ, ಸುಖಾಪೇಕ್ಷೆ ಇವೆಲ್ಲವೂ ಶಿಕ್ಷಣವನ್ನು ಪಡೆಯಲು ಇರುವ ತಾತ್ಕಾಲಿಕ ಹಾಗೂ ಸಂಕುಚಿತ ದೃಷ್ಟಿಯಿಂದ ಕೂಡಿದ ಪ್ರೇರಣೆಗಳು. ಇವನ್ನು ನಿಜವಾಗಿಯೂ ನಂಬಿ ಅದರಂತೆಯೇ ಜೀವನವನ್ನು ನಡೆಸಿರುವ ವ್ಯಕ್ತಿಗಳ ಜೀವನ ನೀರಸವಾಗಿ ಅತೃಪ್ತಿ, ಅಶಾಂತಿಯಿಂದ ಕೂಡಿ, ಯಾವ ಸಾಧನೆಯೂ ಇಲ್ಲದೆ ನಿರರ್ಥಕವಾಗಿರುವುದನ್ನು ಗಮನಿಸಬಹುದು. ಅಂತಹವರಿಂದ ಪ್ರೇರಿತರಾದ ಯುವಕರು ಅಂತಹ ಫಲವನ್ನು ಅನುಭವಿಸಿರುವರು. ಇದು ಸಹಜವೇ ಸರಿ. ವಿದ್ಯಾಭ್ಯಾಸದ ನಿಜವಾದ ಗುರಿ ಜ್ಞಾನಾರ್ಜನೆ. ವಿದ್ಯೆಯನ್ನು, ಎಂದರೆ ಜ್ಞಾನವನ್ನು ಅರಸುವವರು ಎಂಬುದೇ 'ವಿದ್ಯಾರ್ಥಿ' ಎಂಬ ಪದಕ್ಕೆ ಅರ್ಥ. ನಮ್ಮ ಜೀವನದ ವಿಕಾಸಕ್ಕೆ ಜ್ಞಾನ ಆವಶ್ಯಕ. ಎಲ್ಲ ಬಗೆಯ ಜ್ಞಾನವೂ ನಮಗೆ ಬೇಕಾಗುವುದು. ಜ್ಞಾನವನ್ನು ಸ್ಥೂಲವಾಗಿ ಎರಡು ಬಗೆಯಾಗಿ ವಿಂಗಡಿಸುತ್ತಾರೆ. ಒಂದು, ಲೌಕಿಕ ಜ್ಞಾನ, ಎರಡನೆಯದು, ಪಾರಮಾರ್ಥಿಕ ಅಥವಾ ಆಧ್ಯಾತ್ಮಿಕ ಜ್ಞಾನ. ಲೌಕಿಕ ಜ್ಞಾನ, ನಮ್ಮ ದೇಹ, ಬುದ್ಧಿ, ಮನಸ್ಸು, ನಮ್ಮ ಸುತ್ತಲಿನ ಸಮಾಜ, ಭಾಷೆ, ವ್ಯಕ್ತಿಗಳು, ತತ್ತ್ವ, ಸಂಸ್ಥೆಗಳು, ವ್ಯಾಪಾರ, ಸರ್ಕಾರ, ನಮ್ಮ ದೇಶ, ಪ್ರಪಂಚದ ಇತರ ದೇಶಗಳು, ಬಾಹ್ಯ ಪ್ರಕೃತಿ – ಇವೆಲ್ಲವನ್ನೂ ಕುರಿತಾದ ಜ್ಞಾನ. ಇವನ್ನು ಸಂಕ್ಷಿಪ್ತವಾಗಿ ವಿಜ್ಞಾನ ಮತ್ತು ಕಲೆ ಎಂದು ವಿದ್ಯಾಭ್ಯಾಸ ಪದ್ಧತಿಯಲ್ಲಿ ಕರೆದಿರುವರು. ವಿಜ್ಞಾನ ಬಾಹ್ಯ ಪ್ರಕೃತಿಯ ನಿಯಮಗಳನ್ನು ವಿವರಿಸುವುದು. ಕಲೆ ಮತ್ತು ಸಮಾಜವಿಜ್ಞಾನ ಮಾನವನ ಮನಸ್ಸು, ಕಲೆ, ಸಂಸ್ಕೃತಿ, ಚರಿತ್ರೆ ಮತ್ತು ಮಾನವ ಸಮಾಜವನ್ನು ಕುರಿತಾಗಿರುವುದು. ಇವೆಲ್ಲ ನಮ್ಮ ನಿತ್ಯಜೀವನಕ್ಕೆ ಬೇಕಾಗಿರುವುವು. ಇವನ್ನೇ ನಾವು ಶಾಲಾವಿದ್ಯಾಭ್ಯಾಸದಲ್ಲಿ ಕಲಿಯುವುದು. ಪಾರಮಾರ್ಥಿಕ ಅಥವಾ ಆಧ್ಯಾತ್ಮಿಕ ಜ್ಞಾನ, ಮೇಲೆ ತಿಳಿಸಿದ ವಿಷಯಗಳ ಆಧಾರವಾದ, ಅವನ್ನು ಒಳಗೊಂಡ ಮತ್ತು ಅವನ್ನು ಮೀರಿದ ಚೈತನ್ಯ ಅಥವಾ ಆತ್ಮವಸ್ತುವಿನ ಧರ್ಮವನ್ನು ಕುರಿತಾಗಿರುವುದು. ಇದು ಆತ್ಮಜ್ಞಾನ, ಧರ್ಮವಿಜ್ಞಾನ. ಈ ವಿಷಯವನ್ನು ವಿದ್ಯಾಭ್ಯಾಸದಲ್ಲಿ ಬೋಧಿಸುವುದಿಲ್ಲ. ಭಾರತಕ್ಕೆ ರಾಜಕೀಯ ಸ್ವಾತಂತ್ರ್ಯ ಬಂದ ಮೇಲೆ ಲೌಕಿಕ ವಿದ್ಯಾಭ್ಯಾಸವನ್ನು ಹರಡುವುದರಲ್ಲಿಯೇ ನಾವು ಇನ್ನೂ ಯಶಸ್ವಿಯಾಗಿಲ್ಲ. ರಾಜಕೀಯ ಸ್ವಾತಂತ್ರ್ಯದ ದೃಷ್ಟಿಯಿಂದ ನಮ್ಮ ದೇಶ ಈಗ ತಾನೆ ಕಣ್ಣು ಬಿಟ್ಟ ಹಸುಳೆ, ನಮ್ಮ ದೇಶದ ಚರಿತ್ರೆಯ ದೃಷ್ಟಿಯಿಂದ ನೋಡಿದರೆ. ನಮ್ಮ ದೇಶ ಪ್ರಾಚೀನವಲ್ಲ, ಸನಾತನ. ನಮ್ಮ ದೇಶವನ್ನು **ಸನಾತನ ಭಾರತ** ಎಂದು ಸ್ವಾಮಿ ವಿವೇಕಾನಂದರು ನಮಗೆ ತಿಳಿಯುವಂತೆ ಹೇಳಿದರು. ನಮ್ಮ ವಿದ್ಯಾಭ್ಯಾಸ ಪದ್ಧತಿ ಆರ್ಷೇಯ. ವಿಜ್ಞಾನ ಮತ್ತು ಧರ್ಮಜ್ಞಾನ ದಲ್ಲಿ ನಮ್ಮ ದೇಶ ಸಮೃದ್ಧವಾಗಿತ್ತು. ವಿದ್ಯಾರ್ಥಿಗಳಿಗೆ ಲೌಕಿಕ ಶಾಸ್ತ್ರ ಮತ್ತು ಆಧ್ಯಾತ್ಮಿಕ ವಿದ್ಯೆ – ಎರಡನ್ನೂ ಹೇಳಿಕೊಡುತ್ತಿದ್ದರು. ಯಾರು ಆಧ್ಯಾತ್ಮಿಕ ವಿದ್ಯೆಯನ್ನು ಬೋಧಿಸುತ್ತಿದ್ದರೋ ಅವರನ್ನೇ ನಮ್ಮ ದೇಶದಲ್ಲಿ 'ಗುರು' ಎಂದು ಸಂಬೋಧಿಸುತ್ತಿದ್ದುದು. ಲೌಕಿಕ ವಿದ್ಯೆಯನ್ನು ಕಲಿಸುವವರಿಗೆ ಈ ಪದವನ್ನು ಉಪಯೋಗಿಸುತ್ತಿರಲಿಲ್ಲ. ಅವರನ್ನು ಆಚಾರ್ಯರು, ಮಾಸ್ತರು ಎಂದು ಕರೆಯಲಾಗುತ್ತಿತ್ತು. ಪ್ರಸ್ತುತ ಲೇಖನದಲ್ಲಿ ಶಾಲಾವಿದ್ಯಾಭ್ಯಾಸ ಮತ್ತು ಅದರಲ್ಲಿ ಶಿಕ್ಷಕರ ಮತ್ತು ಪೋಷಕರ ಪಾತ್ರವನ್ನು ಪ್ರಸ್ತಾಪಿಸಲಾಗುವುದು.

### ಶಾಲಾಶಿಕ್ಷಣ – ವಿದ್ಯಾರ್ಥಿಗಳ ಧೋರಣೆ

ನಮ್ಮ ಮಕ್ಕಳು ಶಾಲೆಗೆ ಹೋಗುತ್ತಿರುವರು ಎಂದು ತಂದೆ ತಾಯಿಗಳು ಸಾಮಾನ್ಯವಾಗಿ ಹೇಳುವುದುಂಟು. ಮಕ್ಕಳು ಸಾಮಾನ್ಯವಾಗಿ ಮಾಡುತ್ತಿರುವುದೂ ಅದೇ. ಏಕೆಂದರೆ, ಅವರು ಶಾಲೆಗೆ ಸುಮ್ಮನೆ ಹೋಗಿ ಬರುವರು. ಶಾಲೆಯಲ್ಲಿ ಪಾಠ ಹೇಳಿಕೊಡಲಾಗುವುದು. ವಿಷಯಗಳು ಅವರದ್ದಾಗಬೇಕಾದರೆ, ವಿದ್ಯಾರ್ಥಿಗಳು ಅವನ್ನು ಅಭ್ಯಾಸ ಮಾಡಬೇಕು. 'ಓದುವುದು' ಅಭ್ಯಾಸದ ಪ್ರಾರಂಭ. ಅದೇ ಕೊನೆಯಲ್ಲ! ಪಾಠಗಳನ್ನು ಕೇಳಬೇಕು, ಓದಬೇಕು. ಅವನ್ನು ಕುರಿತು ಆಲೋಚಿಸಬೇಕು. ಇತರ ಸಂಬಂಧಪಟ್ಟ ವಿಷಯಗಳೊಂದಿಗೆ ಅವನ್ನು ಹೋಲಿಸಬೇಕು. ಅವನ್ನು ಅಭ್ಯಾಸ ಮಾಡಬೇಕು. ಅಂತಹವರಿಗೆ ಮುಂದಿನ ಪಾಠ ಅರ್ಥವಾಗುವುದು. ಪ್ರತಿಯೊಂದು ಪಾಠವೂ ಮುಂದಿನ ಪಾಠಕ್ಕೆ ಅಡಿಪಾಯ. ಬಹುತೇಕ ವಿದ್ಯಾರ್ಥಿಗಳು ಶಾಲೆಗೆ ಕೇವಲ ಹೋಗುವರು. ತರಗತಿಯಲ್ಲಿ ಪ್ರೇಕ್ಷಕರಂತೆ ಇರುವರು. ಏಕೆಂದರೆ ಹಿಂದಿನ ಪಾಠ ಗೊತ್ತಿಲ್ಲ, ಮುಂದಿನ ಪಾಠದಲ್ಲಿ ಸ್ವಾರಸ್ಯವಿಲ್ಲ. ಸಂದೇಹ ಬರಲು ಸಾಧ್ಯವಿಲ್ಲ. ಪ್ರಶ್ನೆಗಳಿಲ್ಲ. ಪಾಠದ ಸಮಯ ಅವರಿಗೆ ನೀರಸವಾಗಿರುವುದು. ಅಕ್ಕಪಕ್ಕದವರೊಂದಿಗೆ ಸತತ ಸಂಭಾಷಣೆ. ಮುಂದೆ ಪ್ರಾಣಪ್ರಿಯ ಜೀವನಸಂಗಾತಿ, ಮೊಬೈಲ್ ಫೋನ್! ಇದು ಈಗಿನ ಸ್ನಾತಕೋತ್ತರ ತರಗತಿಗಳ ಸಾಮಾನ್ಯ ಚಿತ್ರ. ಪಾಠದ ವಿಷಯದಲ್ಲಿ ಶ್ರದ್ಧೆ, ಆಸಕ್ತಿ ಇಲ್ಲದಿರುವುದರಿಂದಲೇ ವಿದ್ಯಾರ್ಥಿಗಳು ಇತರ ವಿಷಯಗಳಲ್ಲಿ ಆಸಕ್ತರಾಗುವುದು ಮತ್ತು ಅವುಗಳಿಂದ ತೊಂದರೆಗೊಳಗಾಗುವುದು, ಹಾಗೂ ಇತರರಿಗೆ – ಸಹಪಾಠಿಗಳಿಗೆ, ಅಧ್ಯಾಪಕರಿಗೆ, ಶಾಲೆಯ ಅಧಿಕಾರಿಗಳಿಗೆ, ಮತ್ತು ತಂದೆತಾಯಿಗಳಿಗೆ – ಕಷ್ಟಗಳನ್ನು ತಂದೊಡ್ಡುವುದು. 'ಪುರಸೊತ್ತಾದರೆ ಇಲ್ಲಿ, ಎಂದೋ ಬರುವೆನು ಅಲ್ಲಿ' ಎನ್ನುವಂತೆ ಇವರಿಗೆ ಬಿಡುವಾದಾಗ ಶಾಲೆಗೆ ಬರುವರು. ಇವರ ಪ್ರಯತ್ನದಿಂದ ಇವರು ತೇರ್ಗಡೆ ಆಗುವಂತಿಲ್ಲ. ಇವರು ಶಾಲೆಗೆ ಹೊರೆ. ಇವರಿಂದ ಪಾರಾಗಬೇಕಾದರೆ, ಶಾಲೆ ಇವರನ್ನು ಪಾಸ್ ಮಾಡಿಸಬೇಕು. ವಿದ್ಯಾಭ್ಯಾಸ ಮುಗಿದ ನಂತರ ನೌಕರಿ ಸೇರಿದರೆ ಆ ಸಂಸ್ಥೆಗೆ ಇವರು ಹೊರೆಯಾಗುವರು. ಇವರು ಓದಿದ ಶಾಲೆಗೆ, ಇವರ ಶಿಕ್ಷಕರಿಗೆ ಮತ್ತು ತಂದೆತಾಯಿಗಳಿಗೆ ಅಗೌರವ ಬರುವುದು.

ಶಿಕ್ಷಣದಲ್ಲಿ ಶ್ರದ್ಧೆ, ಗೌರವ ಇಲ್ಲದ ಇವರಿಂದ ಶಿಕ್ಷಣ ಸಂಸ್ಥೆಗಳಲ್ಲಿ ಮತ್ತು ಸಮಾಜದಲ್ಲಿ ವ್ಯವಸ್ಥೆಗಳು ಹಾಳಾಗುವುವು. ಅವರ ಕೊಡುಗೆ ಇದೇ. ಇದರಿಂದ ಆಗುವ ಹಾನಿ ಏನೆಂದರೆ, ಅವರಿಗೆ ಪ್ರಯತ್ನದಲ್ಲಿ ವಿಶ್ವಾಸ ಹೋಗುವುದು, ಅವರ ಜೀವನ ಬೇಸರದಿಂದ ಕೂಡಿ ಅರ್ಥ ಹೀನವಾಗುವುದು. ಏಕೆಂದರೆ, ಜೀವನದ ಗಂಭೀರ ವಿಷಯಗಳು, ಆದರ್ಶಗಳನ್ನು ಇವರು ಲಘುವಾಗಿ ಕಾಣುತ್ತ ಹಾಸ್ಯ ಮಾಡುವರು.

ಪಠ್ಯದ ವಿಷಯದಲ್ಲಿ ಶ್ರದ್ಧೆ, ಆಸಕ್ತಿಯುಳ್ಳ ವಿದ್ಯಾರ್ಥಿಗಳು ಉಪಾಧ್ಯಾಯರು ವಿಧಿಸುವ ಅಭ್ಯಾಸಗಳನ್ನು ಮಾಡುವರು, ಸಂದೇಹ ಪರಿಹಾರಕ್ಕೆ ಉಪಾಧ್ಯಾಯರ ಹಿಂದೆ ಬೀಳುವರು. ಹಲವಾರು ಪ್ರಶ್ನೆಗಳನ್ನು ಹಾಕುವರು. ಸಂಬಂಧಪಟ್ಟ ವಿಷಯಗಳ ನ್ನೆಲ್ಲ ಚರ್ಚಿಸುವರು. ಸಂದೇಹ ಪರಿಹಾರಕ್ಕೆ ಅಧ್ಯಾಪಕರು ಸೂಚಿ ಸುವ ಪ್ರಯತ್ನಗಳನ್ನು ಮಾಡುವರು. ಅವು ಯಶಸ್ವಿಯಾದರೆ, ಸಂತೋಷದಿಂದ, ಕೃತಜ್ಞತೆಯಿಂದ ಅಧ್ಯಾಪಕರಿಗೆ ತಿಳಿಸುವರು. ಅಂತಹ ವಿದ್ಯಾರ್ಥಿಗಳು ತಪ್ಪದೆ ಶಾಲೆಗೆ ಹೋಗುವರು, ಪಾಠದ ಸಮಯದಲ್ಲಿ ಏಕಾಗ್ರತೆಯಿಂದ ಕೇಳಿಸಿಕೊಳ್ಳುವರು, ಎಚ್ಚರಿಕೆ ಯಿಂದ ಟಿಪ್ಪಣಿ ಮಾಡಿಕೊಳ್ಳುವರು. ಉಪಾಧ್ಯಾಯರು ಹೇಳುವು ದನ್ನು ಕೇಳಿಸಿಕೊಳ್ಳುವುದಕ್ಕೆ ಸಹಪಾಠಿಗಳಿಂದ ಅಡ್ಡಿಯಾದರೆ, ಅವರು ಇಷ್ಟಪಡುವುದಿಲ್ಲ. ಅಂತಹವರೊಂದಿಗೆ ಅವರು ಬೆರೆಯು ವುದೂ ಇಲ್ಲ. ತರಗತಿಯಲ್ಲಿ ಕೊನೆಯ ಸಾಲು ಅವರಿಗಲ್ಲ. ವಿದ್ಯಾ ಭ್ಯಾಸದಲ್ಲಿ ಆಸಕ್ತಿ ಇಲ್ಲದವರು ಉಪಾಧ್ಯಾಯರಿಂದ ದೂರವಿರಲು ಪ್ರಯತ್ನಿಸುವರು; ಆಸಕ್ತರಾದವರು, ಉಪಾಧ್ಯಾಯರನ್ನು ಹುಡುಕಿ ಕೊಂಡು ಹೋಗುವರು. ನಂತರ, ಕೆಲಸಕ್ಕೆ ಸೇರಿದ ಮೇಲೆ, ಇವರ ಜ್ಞಾನ, ಕಾರ್ಯದಕ್ಷತೆಯಿಂದ ಇವರಿಗೆ ಕೆಲಸ ಕೊಟ್ಟ ಸಂಸ್ಥೆ ಪ್ರಯೋ ಜನ ಪಡೆಯುವುದು, ಇವರು ಓದಿದ ಶಾಲೆಗೆ, ಶಿಕ್ಷಕರಿಗೆ ಇವರಿಂದ ಗೌರವ ಬರುವುದು. ಇತ್ತೀಚಿನ ದಿನಗಳಲ್ಲಿ ಇಂತಹವರ ಸಂಖ್ಯೆ ಕಡಿಮೆಯಾಗುತ್ತಿದೆ.

## ಶಿಕ್ಷಣದ ಮೆಟ್ಟಿಲುಗಳು – ಪ್ರೌಢ ಮತ್ತು ಪದವಿ ಶಿಕ್ಷಣ

ನಮ್ಮ ಇಂದಿನ ಶಿಕ್ಷಣ ಪದ್ಧತಿಯಲ್ಲಿ ನಾಲ್ಕು ಹಂತಗಳಿವೆ: ಪ್ರಾಥಮಿಕ, ಪ್ರೌಢ, ಪದವಿ ಮತ್ತು ಸ್ನಾತಕೋತ್ತರ. ಪ್ರಾಥಮಿಕ ಶಿಕ್ಷಣಕ್ಕೆ ಮುಂಚಿನದು, ನರ್ಸರಿ (ಆಟದ ಶಾಲೆ, ನರ್ಸರಿ ಅಥವಾ ಮಾಂಟೆಸರಿ). ಪ್ರೌಢಶಾಲೆ ಮತ್ತು ಪದವಿಗೆ ಮಧ್ಯದಲ್ಲಿರುವುದು ಪಿ.ಯು.ಸಿ. ಏಳು ವರ್ಷಗಳ ಪ್ರಾಥಮಿಕ ಶಿಕ್ಷಣದಿಂದ ಮಕ್ಕಳಿಗೆ ಸಾಕ್ಷರತೆ ದೊರೆಯುವುದು. ಇದು ನಿರಕ್ಷರತೆಯಿಂದ ಅವರನ್ನು ಪಾರುಮಾಡುವುದು. ಸಾಮಾನ್ಯ ವ್ಯವಹಾರಕ್ಕೆ ಇದು ಸಾಲದು. ನಂತರದ ಮೂರು ವರ್ಷಗಳ ಪ್ರೌಢಶಾಲೆಯ ಶಿಕ್ಷಣದಲ್ಲಿ ಮಕ್ಕಳಿಗೆ ಸರಳ ಸಾಮಾನ್ಯ ವಿಜ್ಞಾನ, ಗಣಿತ, ಸಮಾಜಶಾಸ್ತ್ರ, ಭಾಷೆ ಮುಂತಾ ದುವನ್ನು ಇನ್ನೂ ಸ್ವಲ್ಪ ಹೇಳಿಕೊಡಲಾಗುವುದು. ಇದು ಸಾಮಾನ್ಯ ತಿಳಿವಳಿಕೆಯನ್ನು ಕೊಡುವುದು. ಇದು ಕನಿಷ್ಠ ಮಟ್ಟ. ಕೊನೆ ಮಟ್ಟದ ನೌಕರಿ ದೊರೆಯಬೇಕಾದರೆ ಹತ್ತನೆಯ ತರಗತಿಯಲ್ಲಿ ಉತ್ತೀರ್ಣ ರಾಗಿರಬೇಕು. ಇವರಿಗೆ ಗಣಿತ, ವಿಜ್ಞಾನದ ಪರಿಚಯವಾಗಿರುವುದು. 'ಹೇಳಿದಂತೆ ಮಾಡಿ, ಹೇಳಿದಷ್ಟು ಮಾಡಿ' ಎನ್ನುವ ಕೆಲಸ ದೊರೆಯು ವುದು. ಇದರಲ್ಲಿ ಎಡವಟ್ಟುಗಳು ಆಗದಿದ್ದರೆ, ಮಾಲೀಕರು ಸಂತೋಷಪಡುವರು. ಈ ವೇಳೆಗೆ ವಿದ್ಯಾರ್ಥಿಗಳಿಗೆ ಹದಿನಾರು ವರ್ಷ ವಯಸ್ಸಾಗಿರುವುದು. ಇತ್ತೀಚಿನ ಕಾನೂನಿನಂತೆ ಅವರು ಮತ ಚಲಾಯಿಸಬಹುದು. ಅವರು ಪ್ರೌಢಶಾಲೆಯ ವಿದ್ಯಾಭ್ಯಾಸ ಮುಗಿಸಿ ಪ್ರೌಢರಾಗಿರುವರು. ತಂದೆತಾಯಿಗಳು ಅವರೊಡನೆ ಎಚ್ಚರಿಕೆಯಿಂದ ವರ್ತಿಸಬೇಕಾಗುವುದು. ಕನಿಷ್ಠ ವಿದ್ಯಾಭ್ಯಾಸ ನಮ್ಮ ದೇಶದ ಎಲ್ಲ ಮಕ್ಕಳಿಗೂ ಕಡ್ಡಾಯವಾಗಿ ದೊರೆಯುವ ಸುದಿನ ಬರಲೆಂದು ನಾವು ಹಾರೈಸೋಣ.

ಪ್ರೌಢಶಿಕ್ಷಣದಿಂದ ಪದವಿ ತರಗತಿಗೆ ಹೋಗಲು ವಿದ್ಯಾರ್ಥಿ ಗಳಿಗೆ ಪೂರ್ವಸಿದ್ಧತೆ ನೀಡುವ ಸಲುವಾಗಿ ಎರಡು ವರ್ಷಗಳ ಪಿ.ಯು.ಸಿ. ಇದೆ. ಇದು ಪದವಿಪೂರ್ವ ಶಿಕ್ಷಣ. ಇದರಲ್ಲಿ ಗಣಿತ, ವಿಜ್ಞಾನದ ಪಾಠಗಳು ಸ್ವಲ್ಪ ಮೇಲ್ಮಟ್ಟದವಾಗಿರುತ್ತವೆ. ಇದಕ್ಕೆ ಹೆದರುವವರು ಸಾಮಾನ್ಯವಾಗಿ ಸಮಾಜಶಾಸ್ತ್ರ ಅಥವಾ ವಾಣಿಜ್ಯ ಶಾಸ್ತ್ರಗಳನ್ನು ಆರಿಸಿಕೊಳ್ಳುವರು. ಇವುಗಳಲ್ಲಿ ಆಸಕ್ತಿ ಇರುವವರೂ ಇವನ್ನು ಆರಿಸಿಕೊಳ್ಳುವರು. ಆದರೆ, 'ಹೋದೆಯಾ ಕಿಟಕಿಯಲ್ಲಿ ಎಂದರೆ, ಬಂದೆ ಗವಾಕ್ಷಿಯಲ್ಲಿ!' ಎನ್ನುವಂತೆ ಗಣಿತ ಇಲ್ಲಿಯೂ ಪ್ರವೇಶಿಸುವುದು. ಇಲ್ಲಿಯ ಪಾಠಗಳು ಸ್ವಲ್ಪ ಕ್ಲಿಷ್ಟವಾಗಿ ವಿದ್ಯಾರ್ಥಿ ಗಳ ಕಲಿಯುವ ಯೋಗ್ಯತೆಯನ್ನು ಪರೀಕ್ಷಿಸುವಂತೆ ಇರುತ್ತವೆ. ಕ್ರೀಡಾಸಕ್ತರಾಗಿದ್ದರೂ ಹತ್ತನೆ ತರಗತಿಯಲ್ಲಿ ಉತ್ತೀರ್ಣರಾಗ ಬಹುದು. ಪಿ.ಯು.ಸಿ. ಮುಗಿಸಿದವರಿಗೆ ಅವರು ಓದಿರುವ ಶಾಸ್ತ್ರ ಗಳ ಉಪಯೋಗ ಅಥವಾ ಗುರಿ ಸ್ಪಷ್ಟವಾಗಿರುವುದಿಲ್ಲ. ಪಿ.ಯು.ಸಿ. ಯಲ್ಲಿ ಯಶಸ್ವಿಯಾಗಿದ್ದರೂ ಅವರ ಶಿಕ್ಷಣದ ಮಟ್ಟವನ್ನು ಸಾಮಾನ್ಯ ವಿದ್ಯಾಭ್ಯಾಸವೆಂದೇ ಪರಿಗಣಿಸಲಾಗುವುದು.

ವಿಜ್ಞಾನ–ಗಣಿತ, ಸಮಾಜಶಾಸ್ತ್ರ ಅಥವಾ ವಾಣಿಜ್ಯಶಾಸ್ತ್ರ – ಇವುಗಳ ವಿಸ್ತಾರವಾದ ಶಾಸ್ತ್ರಾಧ್ಯಯನ ಪದವಿ ಶಿಕ್ಷಣದಿಂದ ಪ್ರಾರಂಭವಾಗುವುದು. ಮೂರು ಅಥವಾ ನಾಲ್ಕು ವರ್ಷಗಳಲ್ಲಿ ಇವುಗಳ ಬೋಧನೆ ವಿಶೇಷವಾಗಿ ಆಗುವುದು. ವಿಷಯಗಳ ಹೊರೆ ಅವರ ಮೇಲೆ ಬೀಳುವುದು. ಆಳ ಕಡಿಮೆ, ವಿಸ್ತಾರ ಹೆಚ್ಚು. ಆದು ದರಿಂದ ಅವರ ಜ್ಞಾನ ಆಳವಾಗಿರುವುದಿಲ್ಲ, ಅನೇಕ ವಿಷಯಗಳ ಪರಿಚಯ ಆಗುವುದು. ನಿತ್ಯ ಜೀವನದ ಸಮಸ್ಯೆಗಳಿಗೆ ಇವನ್ನು ಹೇಗೆ ಉಪಯೋಗಿಸಬೇಕೆಂಬ ತಿಳಿವಳಿಕೆ ಸಾಲದಾಗಿರುವುದು. ಅದಕ್ಕಾಗಿಯೇ ಸ್ನಾತಕೋತ್ತರ ಶಿಕ್ಷಣ ಬೇಕಾಗಿರುವುದು. ಈ ವೇಳೆಗೆ ವಿದ್ಯಾರ್ಥಿಗಳಿಗೆ ೨೧–೨೨ ವರ್ಷ ವಯಸ್ಸಾಗಿರುವುದು. ಇವರಿಗೆ ಸಹಾಯಕರ ಹುದ್ದೆ ಸಿಗುವುದು. ತಾವಾಗಿಯೇ ಆಲೋಚನೆ ಮಾಡ ಲಾರರು; ತೋರಿಸಿಕೊಟ್ಟಂತೆ ಮಾಡಲು ಸಾಧ್ಯ. ಪದವಿ ತರಗತಿಯ ಕೊನೆಯ ವರ್ಷದಲ್ಲಿ ತೇರ್ಗಡೆಯಾಗದಿದ್ದರೆ, ನೌಕರಿ ದೃಷ್ಟಿಯಿಂದ ಅವರ ವಿದ್ಯಾಭ್ಯಾಸದ ಮಟ್ಟವನ್ನು ಕನಿಷ್ಠ ವಿದ್ಯಾಭ್ಯಾಸ (ಹತ್ತನೆಯ ತರಗತಿ) ಎಂದೇ ಪರಿಗಣಿಸಲಾಗುವುದು.

## ಉನ್ನತ ಶಿಕ್ಷಣ

ಸ್ನಾತಕೋತ್ತರ ಪದವಿ ಮತ್ತು ಪಿಎಚ್.ಡಿ. ಇವೆರಡನ್ನೂ ಉನ್ನತ ಶಿಕ್ಷಣ ಎಂದು ವರ್ಗೀಕರಿಸಲಾಗಿದೆ. ಸ್ನಾತಕೋತ್ತರ ಪದವಿಗೆ

(ಮಾಸ್ಟರ್ಸ್ ಡಿಗ್ರಿ) ಸಾಮಾನ್ಯವಾಗಿ ಎರಡು ವರ್ಷಗಳ ಕಾಲ ಬೇಕಾಗುವುದು. ಈ ವೇಳೆಗೆ ವಿದ್ಯಾರ್ಥಿಗಳಿಗೆ ಸುಮಾರು ೨೨ ವರ್ಷ ವಯಸ್ಸಾಗಿರುವುದು. ಪದವಿಯಲ್ಲಿ ಓದಿದ ಯಾವುದಾದರೂ ಒಂದು ವಿಷಯವನ್ನು ಸ್ನಾತಕೋತ್ತರ ಮಟ್ಟದಲ್ಲಿ ಆರಿಸಿಕೊಳ್ಳಬಹುದು. ಇಲ್ಲಿ ಒಂದು ವಿಷಯವನ್ನು ಆಳವಾಗಿ ಅಧ್ಯಯನ ಮಾಡಲಾಗುವುದು. ಪದವಿಯಲ್ಲಿ ಇಲ್ಲದ ಮೂರು ಅಂಶಗಳನ್ನು ಇಲ್ಲಿ ಕಡ್ಡಾಯ ಮಾಡಲಾಗಿದೆ. ಒಂದು, ವಿಷಯಗಳ ಮಂಡನೆ. ಶಾಸ್ತ್ರ ವಿಷಯವೊಂದರ ಬಗ್ಗೆ ಎಲ್ಲರಿಗೂ ತಿಳಿಯುವಂತೆ ಕ್ರಮಬದ್ಧವಾಗಿ, ಸಕಾರಣವಾಗಿ ಆಧಾರಸಹಿತವಾಗಿ ಸಹಪಾಠಿಗಳು ಮತ್ತು ಅಧ್ಯಾಪಕವೃಂದದ ಮಧ್ಯೆ ಮಾತನಾಡುವುದು (ಸೆಮಿನಾರ್ ಪ್ರೆಸೆಂಟೇಶನ್). ಇದರ ಸಾರಾಂಶವನ್ನು ಬರೆದು ಒಪ್ಪಿಸಬೇಕು. ಒಂದು ವಿಷಯವನ್ನು ತಿಳಿದಿದ್ದರೆ ಸಾಲದು. ಅದನ್ನು ಮತ್ತೊಬ್ಬರಿಗೆ ಸಮರ್ಪಕವಾಗಿ ತಿಳಿಸಬೇಕು. ಇದು ಮುಖ್ಯ. ವ್ಯಾಪಾರ, ವಾಣಿಜ್ಯವಲ್ಲದೆ ಸಾಮಾನ್ಯ ವ್ಯವಹಾರವೂ ತಾಂತ್ರಿಕವಾಗುತ್ತಿರುವ ಇಂದಿನ ದಿನಗಳಲ್ಲಿ ಇದು ಆವಶ್ಯಕವೂ ಹೌದು. ಸ್ನಾತಕೋತ್ತರ ಪದವಿ ಪಡೆದಿರುವವರು ಮಾತ್ರ ಪದವಿ ತರಗತಿಗೆ ಶಿಕ್ಷಕರಾಗಲು ಅರ್ಹ. ಬೋಧನಾ ಸಾಮರ್ಥ್ಯ, ಮತ್ತು ಮಂಡನೆ ಶಿಕ್ಷಕರಿಗೆ ಆವಶ್ಯಕ. ಎರಡನೆಯದು, ತಾವು ಕಲಿತ ಒಂದು ಶಾಸ್ತ್ರವಿಧಾನವನ್ನು ನಿತ್ಯಜೀವನದ ಸಮಸ್ಯೆಯೊಂದರಲ್ಲಿ ಉಪಯೋಗಿಸಿ ತಮಗೆ ದೊರೆತ ಫಲಿತಾಂಶವನ್ನು ಸಹಪಾಠಿಗಳು ಮತ್ತು ಅಧ್ಯಾಪಕರ ಮುಂದೆ ಮಂಡಿಸಿ ಬರೆದು ಒಪ್ಪಿಸಬೇಕು. ಇದನ್ನು 'ಪ್ರಾಜೆಕ್ಟ್ ವರ್ಕ್' ಎನ್ನುತ್ತಾರೆ. ಇದು ಸಾಮಾನ್ಯ ವಿಶ್ವವಿದ್ಯಾಲಯಗಳಲ್ಲಿ ಅಷ್ಟೇನೂ ಸರಿಯಾಗಿ ನಡೆಯುತ್ತಿಲ್ಲ. ಮಂಡನೆ ಹಾಗೂ ಶಾಸ್ತ್ರೋಪಯೋಗದ ಅನುಭವವನ್ನು ವಿದ್ಯಾರ್ಥಿಗಳಿಗೆ ಸ್ಯಾಂಪಲ್‌ನಂತೆ ಸ್ನಾತಕೋತ್ತರದಲ್ಲಿ ಕೊಡಲಾಗುವುದು. ಇತ್ತೀಚೆಗೆ, ಮತ್ತೊಂದು ವಿಷಯವನ್ನು ಸ್ನಾತಕೋತ್ತರದಲ್ಲಿ ಸೇರಿಸಲಾಗಿದೆ. ಅದೇ ಸಂಶೋಧನಾ ವಿಧಾನ ಎಂಬುದು. ಇದನ್ನು ಹೇಳಿಕೊಡುವರು ಮತ್ತು ಇದಕ್ಕೆ ಪರೀಕ್ಷೆ ಇದೆ. ಸಂಶೋಧನೆಯನ್ನು ಹೇಗೆ ಮಾಡಬೇಕು, ಅದರಿಂದ ಹೊರಹೊಮ್ಮುವ ಅಂಶಗಳನ್ನು ಹೇಗೆ ವಿಶ್ಲೇಷಿಸಬೇಕು, ಮತ್ತು ಅದರಲ್ಲಿ ಇರಬೇಕಾದ ನೈತಿಕತೆ ಏನು – ಇವೆಲ್ಲವೂ ಅದರಲ್ಲಿ ಸೇರಿವೆ.

ಸ್ನಾತಕೋತ್ತರ ಪದವಿಯ ಬಗ್ಗೆ ಗಮನಿಸಬೇಕಾದ ಅಂಶವೊಂದಿದೆ. ಪದವಿಯ ಅವಧಿ ಮೂರು ಅಥವಾ ನಾಲ್ಕು ವರ್ಷಗಳು. ಸ್ನಾತಕೋತ್ತರ ಶಿಕ್ಷಣ ಎರಡು ವರ್ಷಗಳು. ಮತ್ತು ಇವರಿಗೆ ಪದವಿ ಇರುವವರಿಗಿಂತ ಮೇಲಿನ ನೌಕರಿ ದೊರೆಯುವುದು. ಸ್ನಾತಕೋತ್ತರ ಎರಡು ವರ್ಷಗಳ ಪದವಿ ಕೋರ್ಸ್ ಎಂದು ಹಾಸ್ಯ ಮಾಡಿ ಅದನ್ನು ಗೌಣವಾಗಿ ಕಾಣಬಹುದು. ನೌಕರಿ ಬಡ್ತಿಗಾಗಿ ಸ್ನಾತಕೋತ್ತರ ಪದವಿಯನ್ನು ಪಡೆಯಲು ಮಧ್ಯವಯಸ್ಸಿನವರು ಮುಂದಾಗುವರು. ಸ್ನಾತಕೋತ್ತರದಲ್ಲಿ ವಿಷಯಗಳು ಹೆಚ್ಚು, ಆಳ ಹೆಚ್ಚು, ಶಾಸ್ತ್ರವಿಷಯಗಳು ಕ್ಲಿಷ್ಟವಾಗುವುವು, ಮತ್ತು ಪಠ್ಯಪುಸ್ತಕಗಳು ಇಲ್ಲವಾಗುವುವು. ಅನೇಕ ಮೂಲಗಳಿಂದ ವಿಷಯಗಳನ್ನು ಗ್ರಹಿಸಿ ಶಾಸ್ತ್ರವಿಷಯಗಳನ್ನು ಅರ್ಥ ಮಾಡಿಕೊಳ್ಳಬೇಕಾಗುವುದು. ಒಂದು ವಿಷಯವನ್ನು ಅಧ್ಯಾಪಕರು ಹೇಳಿಕೊಟ್ಟಿಲ್ಲ, ಆದ್ದರಿಂದ ನಮಗೆ ಗೊತ್ತಿಲ್ಲ ಎಂದು ಹೇಳಲಾಗದು. ನಿರೀಕ್ಷೆ ಮತ್ತು ಜವಾಬ್ದಾರಿ ಪದವಿಯವರಿಗಿಂತ ಹೆಚ್ಚಾಗಿರುವುದು.

### ಪಿಎಚ್.ಡಿ.

ಇದು ಮುಖ್ಯವಾಗಿ ಸಂಶೋಧನೆಗೆ ನೀಡುವ ಪದವಿ. ಇದಕ್ಕೆ ಸ್ನಾತಕೋತ್ತರ ಪದವಿ ಇರಬೇಕು. ಸ್ನಾತಕೋತ್ತರ ತರಗತಿಯ ಬೋಧಕರು ಪಿಎಚ್.ಡಿ. ಡಿಗ್ರಿಯನ್ನು ಪಡೆದಿರಬೇಕೆಂದು ವಿಶ್ವವಿದ್ಯಾನಿಲಯ ಆಯೋಗ ವಿಧಿಸಿದೆ. ಒಂದು ವಿಶ್ವವಿದ್ಯಾನಿಲಯ ಕೊಡುವ ಅತ್ಯುಚ್ಚ ಪದವಿ ಇದೇ. ಯಾವ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದಿರುವರೋ ಅದರಲ್ಲಿ ಯಾವುದಾದರೂ ಒಂದು ಸಮಸ್ಯೆಯ ಬಗ್ಗೆ ಸಂಶೋಧನೆಯನ್ನು ಮಾಡಬೇಕು, ಪರಿಹಾರವನ್ನು ಕೊಡಬೇಕು, ಎಷ್ಟರ ಮಟ್ಟಿಗೆ 'ಪರಿಹಾರ' ದೊರೆತಿದೆ ಎನ್ನುವುದನ್ನು ಪರಿಶೋಧನೆಯಿಂದ ತಿಳಿಸಬೇಕು. ಅದು ಸರಿಯೇ ಎಂದು ಪರೀಕ್ಷಿಸಬೇಕು. ಇವರು ಶಾಸ್ತ್ರವಿಷಯ ಮಂಡನೆಯನ್ನು ಸ್ನಾತಕೋತ್ತರ ವಿದ್ಯಾರ್ಥಿಗಳಿಗಿಂತ ಬಹಳ ಹೆಚ್ಚಾಗಿ ಮಾಡಬೇಕು. ಅಧ್ಯಯನ ಮತ್ತು ಸಂಶೋಧನೆ ಜತೆಜತೆಯಲ್ಲಿ ಹೋಗಬೇಕು. ಸ್ನಾತಕೋತ್ತರ ಮಟ್ಟದಲ್ಲಿ ಸಂಶೋಧನೆಯ ದೃಷ್ಟಿಯಿಂದ ಶಾಸ್ತ್ರಬೋಧನೆಯನ್ನು ಮಾಡಬೇಕು.

ಮಾನವನಿಗೆ ಹೊಸ ಜ್ಞಾನ ದೊರೆಯುವುದು ಪ್ರಯೋಗ ಮತ್ತು ಸಂಶೋಧನೆಯಿಂದ. ಯಾವುದನ್ನು ನಮ್ಮ ಹಿಂದಿನವರು ಸಂಶೋಧನೆಯಿಂದ ಕಂಡುಹಿಡಿದರೋ ಅವನ್ನೆಲ್ಲ ಕ್ರೋಡೀಕರಿಸಿ ಕ್ರಮವಾಗಿ ಜೋಡಿಸಿ ಪಠ್ಯಪುಸ್ತಕಗಳಲ್ಲಿ ಪಾಠಗಳಂತೆ ಇಟ್ಟಿರುವರು. ಒಂದು ತರಗತಿಯ ಪಾಠಗಳಿಗೆ ಆವಶ್ಯಕವಾದ, ಪೂರಕವಾದ ವಿಷಯಗಳನ್ನು ಹಿಂದಿನ ತರಗತಿಯ ಪಾಠಗಳಲ್ಲಿ ಸೇರಿಸಿರುವರು. ಪಠ್ಯಪುಸ್ತಕಗಳು ಕಾಲಕಾಲಕ್ಕೆ ಸಿದ್ಧವಾಗುವುದು ಮತ್ತು ಪರಿಷ್ಕೃತಗೊಳ್ಳುವುದು ಹೀಗೆ. ಪ್ರತಿಯೊಂದು ಪಾಠವೂ ಸ್ವತಂತ್ರವಾಗಿದೆ, ಅದೇ ಜ್ಞಾನದ ತುದಿ, ಕೆಲವೊಂದು ಪಾಠಗಳನ್ನು ಕಲಿತರೆ ಸಾಕು, ನಾವು ಪಾಸಾಗುವುದಕ್ಕೆ ಎಂದು ಭಾವಿಸುವುದು ವಿದ್ಯಾರ್ಥಿಗಳ ಮುಗ್ಧತೆ. ಅದನ್ನು ಭಂಗಗೊಳಿಸುವುದು ಶಿಕ್ಷಕರ ಕರ್ತವ್ಯ.

### ಸಂಶೋಧನೆ

ಸಂಶೋಧನೆ ಎಲ್ಲಾ ಕ್ಷೇತ್ರಗಳಲ್ಲಿಯೂ ನಿರಂತರವಾಗಿ ನಡೆಯಬೇಕಾಗಿರುವುದು ಮತ್ತು ನಡೆಯುತ್ತಿರುವುದು. ಸಂಶೋಧನೆಯಲ್ಲಿ ನಿರತರಾದವರನ್ನು ವಿಜ್ಞಾನಿಗಳೆಂದು ಕರೆಯುವರು. ಧಾರ್ಮಿಕ ಕ್ಷೇತ್ರದಲ್ಲಿ ಇವರನ್ನು ಋಷಿಗಳೆಂದು ಕರೆಯುವರು. ವಿಜ್ಞಾನಿಗಳು ಮನುಷ್ಯನ ಬಾಹ್ಯ ಪ್ರಕೃತಿಯ ಸತ್ಯಗಳನ್ನು ಕಂಡುಹಿಡಿಯುವರು. ಋಷಿಗಳು ಧರ್ಮವಿಜ್ಞಾನಿಗಳು. ಅವರು ಮಾನವನ ಅಂತಃಪ್ರಕೃತಿಯ ನಿಯಮಗಳನ್ನು ಕಂಡುಹಿಡಿಯುವರು; ಅದಕ್ಕಾಗಿ ಅವರು ಅಂತರ್ಮುಖಿಗಳಾದರು ಎಂದು ಸ್ವಾಮಿ ವಿವೇಕಾನಂದರು ವಿವರಿಸಿರುವರು. ಎಲ್ಲಾ ಸಂಶೋಧನೆಗಳೂ ಆವಿಷ್ಕಾರದಲ್ಲಿ ಕೊನೆಗೊಳ್ಳುವುದಿಲ್ಲ. ಸಂಶೋಧನೆಯಲ್ಲಿಯೂ ಅನೇಕ ವಿಧಗಳಿವೆ ಮತ್ತು ಅಂತಸ್ತುಗಳಿವೆ. ಪ್ರಯೋಗ, ವಿಶ್ಲೇಷಣೆ, ನಿಷ್ಪಕ್ಷಪಾತ ಪರಿಶೋಧನೆ

ಗಳು ಸಂಶೋಧನೆಯ ಮೂಲಭೂತ ಅಂಶಗಳು. ಆಧ್ಯಾತ್ಮಿಕ ಸಾಧನೆಯ ಕ್ಷೇತ್ರದಲ್ಲಿ ಶ್ರೀರಾಮಕೃಷ್ಣರಂತಹ ಕುಶಲ ಪ್ರಯೋಗಶಾಲಿಗಳನ್ನು ಕಾಣಲಾರೆವು. ನಾವು ಅನೇಕ ವಿಷಯಗಳನ್ನು ತಿಳಿದಿದ್ದರೆ ಸಾಲದು. ಅವನ್ನು ಜೀವನದ ಸಮಸ್ಯೆಗಳಿಗೆ ಪರಿಹಾರ ಕಂಡುಹಿಡಿಯುವುದಕ್ಕೆ ಉಪಯೋಗಿಸಬೇಕು.

ಈಗ ಮಾನವನಿಗೆ ದೊರೆತಿರುವ ಜ್ಞಾನರಾಶಿ ಬಂದಿರುವುದೇ ಸಂಶೋಧನೆಯಿಂದ. ಇದಕ್ಕೆ ಯುವವಿದ್ಯಾರ್ಥಿಗಳನ್ನು ತಯಾರು ಮಾಡುವುದಕ್ಕಾಗಿ ಸ್ನಾತಕೋತ್ತರ ತರಗತಿ ಇರುವುದು. ಇದಕ್ಕೆ ಪೋಷಕವಾಗಿ ಇರುವುದೇ ಪದವಿ ಮತ್ತು ಪದವಿಪೂರ್ವ ವಿದ್ಯಾಭ್ಯಾಸ. ಹೀಗೆ ಶಿಕ್ಷಣ ಪದ್ಧತಿ ಮೆಟ್ಟಿಲು ಮೆಟ್ಟಿಲಾಗಿ ಇದೆ. ಒಂದು ಹಂತ ಮೇಲಿನ ಹಂತಕ್ಕೆ ನಮ್ಮನ್ನು ಕೊಂಡೊಯ್ಯುತ್ತದೆ. ಈ ದೃಷ್ಟಿಯಿಂದ ಶಿಕ್ಷಕರು, ವಿದ್ಯಾರ್ಥಿಗಳು, ಮತ್ತು ತಂದೆತಾಯಿಗಳು ಶಿಕ್ಷಣ ಪದ್ಧತಿಯನ್ನು ನೋಡಿದರೆ, ಶಾಲಾಶಿಕ್ಷಣ ಅರ್ಥ ಪೂರ್ಣವಾಗಿ ಕಾಣುವುದು. ಮನುಷ್ಯನ ಜ್ಞಾನದಲ್ಲಿ ಅಲ್ಲಲ್ಲಿ ಅಸಮರ್ಪಕತೆ ಇರುವುದು. ಒಂದಕ್ಕೂ ಮತ್ತೊಂದಕ್ಕೂ ಇರುವ ಸಂಬಂಧ ತಿಳಿದಿರುವುದಿಲ್ಲ. 'ಪರಿಣಾಮ ಗೊತ್ತಿದೆ, ಕಾರಣ ಅಡಗಿದೆ' – ಇದೇ ಮನುಷ್ಯನ ಕಥೆ. ರೋಗಿ ಹೊಟ್ಟೆಶೂಲೆಯನ್ನೋ ತಲೆನೋವನ್ನೋ ಅನುಭವಿಸುತ್ತಿರುವನು. ವೈದ್ಯರು ಅದರ ಕಾರಣವನ್ನು ಕಂಡುಹಿಡಿಯಬೇಕು. ಅಲ್ಲಿಯವರೆಗೆ ಅವರು ಔಷಧಿ ಕೊಡಲಾಗುವುದಿಲ್ಲ. ಕಾರ್ಯ–ಕಾರಣ ಸಂಬಂಧ ಹೊರಬೀಳುವುದು ಸಂಶೋಧನೆಯಿಂದ. ಯಾವ ದೇಶ ಸಂಶೋಧನೆಯನ್ನು ನಿರಂತರವಾಗಿ ಚೆನ್ನಾಗಿ ಮಾಡುತ್ತಿರುವುದೊ ಅದು ಹೆಚ್ಚು ಜ್ಞಾನರಾಶಿಯನ್ನು ಒಳಕೊಂಡು ಸಂಪದ್ಭರಿತವಾಗಿ ಹೆಚ್ಚು ಮುಂದುವರಿಯುತ್ತದೆ.

## ಶಿಕ್ಷಣದ ಉಪಯೋಗಗಳು

ಎಲ್ಲರೂ ಸಾಮಾನ್ಯವಾಗಿ ಯೋಚಿಸುವಂತೆ ವಿದ್ಯಾಭ್ಯಾಸದ ತಕ್ಷಣದ ಉಪಯೋಗ, ಜೀವನೋಪಾಯಕ್ಕೆ ಬೇಕಾದ ನೌಕರಿ ಪಡೆಯುವುದು. ಹೀಗೆ ಅದು ಪ್ರಾರಂಭವಾಗುವುದು ಒಳ್ಳೆಯದೆ. ಆದರೆ, ಅದು ಹೀಗೆ ಕೊನೆಗಾಣಬಾರದು. ಶಾಲೆಯ ಪಾಠಗಳು ನಮ್ಮ ಜೀವನಕ್ಕೆ ಸಂಬಂಧಿಸಿದ ಅನೇಕ ವಿಷಯಗಳನ್ನು ತಿಳಿಸುತ್ತವೆ. ಪ್ರಾರಂಭದಲ್ಲಿ ಇದು ವಿದ್ಯಾರ್ಥಿಗಳ ತಲೆಯನ್ನು ವಿಷಯಗಳ ಉಗ್ರಾಣವನ್ನಾಗಿ ಮಾಡುವಂತೆ ತೋರಬಹುದು. ಮುಂದೆ ಹೋದಂತೆ ವಿಷಯಗಳು ಒಂದಕ್ಕೊಂದು ಸಂಬಂಧಪಟ್ಟಿರುವುದು ತಿಳಿಯುತ್ತದೆ. ಶಿಕ್ಷಣವೆನ್ನುವುದು ನಾವು ಶಾಲೆಯಲ್ಲಿ ಕಲಿಯುವ ವಿಷಯಗಳಿಗೆ ಸೀಮಿತವಲ್ಲ, ನಮ್ಮ ಜೀವನಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳ ಬಗ್ಗೆಯೂ ನಮಗೆ ಶಿಕ್ಷಣ ಬೇಕಾಗುವುದು. ಉದಾಹರಣೆಗೆ, ಆಹಾರ, ಆರೋಗ್ಯ, ನೈರ್ಮಲ್ಯ, ಪರಿಸರ, ವಾಯುಗುಣ, ನೆರೆಹೊರೆ ಮತ್ತು ಸಹೋದ್ಯೋಗಿಗಳೊಡನೆ ಸಂಬಂಧ ಮುಂತಾದುವು. ಮುಖ್ಯವಾಗಿ ಯಾವುದನ್ನು ಕಲಿತರೆ ಇತರ ವಿಷಯಗಳನ್ನೂ ನಾವು ಕಲಿತುಕೊಳ್ಳಬಹುದೊ ಆ ಮೂಲಭೂತ ವಿಷಯಗಳನ್ನೆಲ್ಲ ಶಾಲಾಶಿಕ್ಷಣದಲ್ಲಿ ಸೇರಿಸಲಾಗಿದೆ. ಮುಂದೆ ಅವುಗಳ ಸಹಾಯದಿಂದ ನಾವು ಮಿಕ್ಕೆಲ್ಲ ಅಂಶಗಳನ್ನೂ ಕಲಿತುಕೊಳ್ಳಬಹುದು. ಯಾವುದಾದರೊಂದು ವಿಷಯದಲ್ಲಿ ನಮಗೆ ಶಿಕ್ಷಣವಿದ್ದರೆ, ಏನನ್ನು ಮಾಡಬೇಕು ಏನನ್ನು ಮಾಡಬಾರದು ಎಂಬುದು ಗೊತ್ತಾಗುವುದು. ಉದಾಹರಣೆಗೆ, ಪ್ರಥಮ ಚಿಕಿತ್ಸೆಯ ಬಗ್ಗೆ ನಮಗೆ ಶಿಕ್ಷಣ ದೊರೆತಿದ್ದರೆ, ಪ್ರಥಮ ಚಿಕಿತ್ಸೆ ಮಾಡುವಾಗ ಏನನ್ನು ಮಾಡಬೇಕು, ಏನನ್ನು ಮಾಡಬಾರದು ಎಂಬದು ತಿಳಿದಿರುವುದು. ಶಿಕ್ಷಣವೆಂದರೆ ತರಬೇತಿ. ವಿಧಾನಗಳನ್ನು ಬೋಧಿಸಲಾಗುವುದು. ದಾರಿ ಸರಿಯಾಗಿದ್ದರೆ, ಗುರಿಯನ್ನು ಸೇರುವೆವು. ವಿಧಾನ ಮುಖ್ಯ. ಮೂಲಭೂತ ವಿಷಯಗಳನ್ನು ಉದಾಹರಣೆಯ ಮೂಲಕ ಹೇಳಿಕೊಡಲಾಗುವುದು. ಅವನ್ನು ಜೀವನದ ಸಮಸ್ಯೆಗಳನ್ನು ಪರಿಹರಿಸುವುದರಲ್ಲಿ, ಅವರು ಮುಂದೆ ಯಾವ ಕ್ಷೇತ್ರದಲ್ಲಿ ಕೆಲಸ ಮಾಡುವರೊ ಅದರಲ್ಲಿ ವಿದ್ಯಾರ್ಥಿಗಳು ಕೌಶಲ್ಯವನ್ನು ತೋರಬೇಕು. ಶಿಕ್ಷಣವೆಂದರೆ ಸಮಸ್ಯಾಪರಿಹಾರ ವಿಧಾನ. ಶಾಲೆಯಲ್ಲಿ ಹೇಳಿಕೊಡುವ ಪಾಠಗಳೆಲ್ಲ ಒಂದಲ್ಲ ಒಂದು ಸಮಸ್ಯೆಗೆ ಪರಿಹಾರ.

## ಸ್ವತಂತ್ರ ಆಲೋಚನಾ ಶಕ್ತಿ

ಶಿಕ್ಷಣದ ಅತ್ಯಂತ ಮುಖ್ಯವಾದ ಉಪಯೋಗವೆಂದರೆ, ಸ್ವತಂತ್ರ ಆಲೋಚನಾ ಶಕ್ತಿ. ಇದು ಇದ್ದಕ್ಕಿದ್ದಂತೆ ಬಂದುಬಿಡುವುದಿಲ್ಲ. ಮೂಲಭೂತ ವಿಷಯಗಳನ್ನು ತಿಳಿದಿರಬೇಕು. ಅವನ್ನು ಉಪಯೋಗಿಸುವುದರಲ್ಲಿ ಅನುಭವ ಪಡೆಯಬೇಕು. ನಮ್ಮ ಕ್ರಿಯಾಶಕ್ತಿ ಕಲ್ಪನಾಶಕ್ತಿಗಳು ಕೆಲಸ ಮಾಡಬೇಕು. ಇವು ಶಿಕ್ಷಣವಿಲ್ಲದೆ ಸಾಧ್ಯವಿಲ್ಲ. ಈಗ ನಮಗೆ ಎಲ್ಲಾ ಕ್ಷೇತ್ರಗಳಲ್ಲಿಯೂ ಮುಖ್ಯವಾಗಿ ಬೇಕಾಗಿರುವುದು ಸ್ವತಂತ್ರ ಆಲೋಚನಾ ಶಕ್ತಿ. ತಾಂತ್ರಿಕ ಶಿಕ್ಷಣ ನಮ್ಮ ದೇಶದಲ್ಲಿ ಚೆನ್ನಾಗಿ ಬೆಳೆದಿದೆ. ಅದರ ಉಪಯೋಗವನ್ನು ನಾವು ಇನ್ನೂ ಪಡೆಯಬೇಕಾಗಿದೆ. ಇದಕ್ಕೆ ಬೇಕಾಗಿರುವುದು ಸ್ವತಂತ್ರ ಆಲೋಚನಾಶಕ್ತಿ. ತಾಂತ್ರಿಕ ಶಕ್ತಿಯನ್ನು ನಾವು ಬಳಸುತ್ತಿದ್ದೇವೆ, ಆದರೆ ಉತ್ಪಾದಿಸುತ್ತಿಲ್ಲ. ಮೊಬೈಲ್ ಫೋನ್ ಉಪಯೋಗಿಸುವುದರಲ್ಲಿ ಪ್ರಪಂಚ ಅಚ್ಚರಿ ಪಡುವಷ್ಟು ಹೆಚ್ಚಾಗಿ ಉಪಯೋಗಿಸಿದ್ದೇವೆ. ಆದರೆ ಅದನ್ನು ನಾವು ಕಂಡುಹಿಡಿಯಲಿಲ್ಲ ಅಥವಾ ಅದರ ತಂತ್ರಜ್ಞಾನವನ್ನು ಪರಿಷ್ಕರಿಸಲಿಲ್ಲ. ವಿಜ್ಞಾನದ ಆವಿಷ್ಕಾರಗಳು ನಮಗೆ ಹೊರಗಿನಿಂದ ಬರುತ್ತಿವೆ, ನಮ್ಮಿಂದ ಬರುತ್ತಿಲ್ಲ. ಇದು ನಮ್ಮ ಶಿಕ್ಷಣದಲ್ಲಿ ಇರುವ ನ್ಯೂನತೆ.

ತರಗತಿಯಲ್ಲಿ ಪ್ರಶ್ನೆ ಕೇಳಿದರೆ, ವಿದ್ಯಾರ್ಥಿಗಳು ಇತರರ ಮುಖ ನೋಡುವರು. ಬಿಡಿಸಲು ಸಮಸ್ಯೆ ಕೊಟ್ಟರೆ, ಪಕ್ಕದವರನ್ನು ಕೇಳಲು ಪ್ರಾರಂಭಿಸುವರು. ಅನುಕರಣೆಯಲ್ಲಿ ನಿಸ್ಸೀಮರು. ಮೀಟಿಂಗ್‌ನಲ್ಲಿ ಸಮಸ್ಯೆಗೆ ಸಲಹೆ ಕೇಳಿದರೆ, ಯಾರೂ ಬಾಯಿ ಬಿಡುವುದಿಲ್ಲ. ಯಾರಾದರೊಬ್ಬರು ಅವರ ಅಭಿಪ್ರಾಯವನ್ನು ತಿಳಿಸಲು ಹೊರಟರೆ, ಅನೇಕರು ಮಧ್ಯೆ ಬಾಯಿಹಾಕುವರು, ಅವರನ್ನು ಟೀಕಿಸುವರು. ಮತ್ತೊಬ್ಬರು ಹೇಳಿದ್ದನ್ನೇ ಸಂಕೋಚವಿಲ್ಲದೆ ತಾವೂ ಹೇಳುವರು. ನಿಮ್ಮ ಸಂಶೋಧನೆಯಲ್ಲಿ ನೀವು ಈ ವಿಧಾನವನ್ನು ಏಕೆ ಉಪಯೋಗಿಸಿದಿರಿ ಎಂದು ಕೇಳಿದರೆ, ಇತರರು ಅದನ್ನು ಉಪಯೋಗಿಸಿರುವರು ಎಂದು ಉತ್ತರಿಸುವರು. ಸ್ವತಂತ್ರ ಆಲೋಚನೆಯ ಅಭಾವವನ್ನು ನಮ್ಮ ದೇಶದ ತಾಂತ್ರಿಕತೆಯಲ್ಲಿ ಕಾಣಬಹುದು.

ಸ್ವತಂತ್ರ ಆಲೋಚನೆಯನ್ನು ಹೊರತು ಪಡಿಸಿ ಮಿಕ್ಕೆಲ್ಲ ವಿಷಯಗಳಲ್ಲಿಯೂ ಪಾಶ್ಚಿಮಾತ್ಯರನ್ನು ನಾವು ಅನುಕರಿಸುತ್ತಿರುವುದನ್ನು ಎಲ್ಲಡೆ ನೋಡಬಹುದು.

ನಮ್ಮಲ್ಲಿ ಸ್ವತಂತ್ರ ಆಲೋಚನೆ ಇಲ್ಲವೆಂದಲ್ಲ. ಅದು ವಿರಳ. ಅನೇಕ ವೇಳೆ ಅದು ಅಷ್ಟೇನೂ ಶಾಲಾವಿದ್ಯಾಭ್ಯಾಸ ಪಡೆಯದವರಿಂದಲೇ ಆಗಿದೆ. ಪಂಜಾಬಿನ ಬಡ ವೃದ್ಧ ಕೂಲಿಗಾರನೊಬ್ಬ ಮಳೆಗಾಲದಲ್ಲಿ ಒಂದೆರಡು ಅಡಿ ನೀರು ನಿಂತಿರುವಾಗ ನೀರಿನ ಮೇಲೆ ಸರಾಗವಾಗಿ ತೇಲಿಹೋಗುವ ಸೈಕಲ್ಲನ್ನು ತಯಾರಿಸಿ ತನ್ನ ದಿನನಿತ್ಯದ ಕೆಲಸಕ್ಕೆ ಉಪಯೋಗಿಸಿದುದನ್ನು ದೂರದರ್ಶನದಲ್ಲಿ ಅನೇಕರು ನೋಡಿರಬಹುದು. ಅನೇಕ ಕೃಷಿ ಉಪಯೋಗಿ ಯಂತ್ರಗಳನ್ನು ಸಾಧಾರಣ ರೈತರು ತಾವೇ ತಯಾರಿಸಿ ಉಪಯೋಗಿಸಿ, ಕೃಷಿ ಕೂಲಿ ಯಾಳುಗಳ ಅಭಾವವನ್ನು ಎದುರಿಸಿ ತಮ್ಮ ಕೆಲಸ ಮಾಡಿರುವರು. ಇದನ್ನು ನೋಡಲು ಕೃಷಿ ವಿಶ್ವವಿದ್ಯಾನಿಲಯದ ವಿಜ್ಞಾನಿಗಳು ಹೋಗಬೇಕಾಯಿತು! ಇಂತಹ ಆವಿಷ್ಕಾರಗಳು, ಪರಿಷ್ಕಾರಗಳು ನಮ್ಮ ಇಹಜೀವನವನ್ನು ಸಹನೀಯವಾಗಿ ಮಾಡಿವೆ. ಇವು ಅಲ್ಲೊಮ್ಮೆ ಆಗೊಮ್ಮೆ ಆಗುವ ಬದಲು ದೇಶದಾದ್ಯಂತ ಎಲ್ಲ ಕ್ಷೇತ್ರ ಗಳಲ್ಲಿಯೂ ವೈಜ್ಞಾನಿಕವಾಗಿ ಆಗಲೆಂದು ವಿಶ್ವವಿದ್ಯಾನಿಲಯಗಳನ್ನು, ಸಂಶೋಧನಾ ಸಂಸ್ಥೆಗಳನ್ನು ನಮ್ಮ ದೇಶದಲ್ಲಿ ಬಹು ವೆಚ್ಚದಿಂದ ಪ್ರಾರಂಭಿಸಿದರು. ಶಾಲಾಶಿಕ್ಷಣ ಉಪಯೋಗವಾಗಬೇಕಾದರೆ, ಸ್ವತಂತ್ರ ಆಲೋಚನಾಶಕ್ತಿಯನ್ನು ವೃದ್ಧಿಗೊಳಿಸಬೇಕು. ಹಿಂದೆ ಪಂಡಿತ್ ಜವಹರಲಾಲ್ ನೆಹರೂ ಅವರು ನ್ಯಾಷನಲ್ ಲ್ಯಾಬೊರೇಟರಿಗಳನ್ನು ಸ್ಥಾಪಿಸಿದಾಗ, ಬ್ರಿಟಿಷರು ನಮ್ಮನ್ನು ಆಳುತ್ತಿದ್ದ ಕಾಲದಲ್ಲಿ ನೊಬೆಲ್ ಪ್ರಶಸ್ತಿ ಪಡೆದು ಭಾರತೀಯ ವೈಜ್ಞಾನಿಕತೆಯ ಧ್ವಜವನ್ನು ಮೇಲೇರಿಸಿದ ಮೇಧಾವಿ ಭೌತಶಾಸ್ತ್ರಜ್ಞರಾದ ಸರ್ ಸಿ.ವಿ. ರಾಮನ್ ಅವರು ಕೆಲವು ಲೆನ್ಸ್‌ಗಳಿರುವ ಒಂದು ಸಣ್ಣ ಪೆಟ್ಟಿಗೆಯನ್ನು ನೆಹರೂ ಅವರ ಮುಂದೆ ಹಿಡಿದು, 'ನೋಡಿ, ಇದೇ ನನ್ನ ಲ್ಯಾಬೊರೇಟರಿ' ಎಂದು ಹೇಳಿದರಂತೆ. ವೈಜ್ಞಾನಿಕ ಆವಿಷ್ಕಾರಗಳು ಜನ್ಮ ತಾಳುವುದು ನಮ್ಮ ಬುದ್ಧಿಶಕ್ತಿಯಿಂದ, ಬೃಹತ್ ಪ್ರಯೋಗ ಶಾಲೆಗಳಿಂದಲ್ಲ ಎಂಬುದು ಅವರ ಮಾರ್ಮಿಕ ಸಂದೇಶವಾಗಿತ್ತು. ಸ್ವಾಮಿ ವಿವೇಕಾನಂದರು ವಿದ್ಯಾಭ್ಯಾಸದ ಬಗ್ಗೆ ಮಾತನಾಡುವಾಗ, 'ಕೇವಲ ವಿಷಯ ಸಂಗ್ರಹವೇ ವಿದ್ಯಾಭ್ಯಾಸವಾಗಿದ್ದರೆ, ಪ್ರಪಂಚದಲ್ಲಿ ಪುಸ್ತಕ ಭಂಡಾರಗಳೇ ಮಹಾಮುನಿಗಳಾಗುತ್ತಿದ್ದವು. ವಿಶ್ವಕೋಶಗಳೇ ಮಹಾಋಷಿಗಳಾಗುತ್ತಿದ್ದವು' ಎಂದು ಹೇಳಿದರು.

### ಶಿಕ್ಷಕರು ಮತ್ತು ಪೋಷಕರ ಪಾತ್ರ

ವಿದ್ಯಾರ್ಥಿಗಳೆಂಬ ನದಿ ಶಿಕ್ಷಕರು ಮತ್ತು ಪೋಷಕರೆಂಬ ಎರಡು ದಡಗಳ ಮಧ್ಯೆ ಹರಿಯುವುದು. ದಡಗಳು ದುರ್ಬಲವಾದರೆ ನದಿಯ ಪಾತ್ರ ಕೆಡುವುದು, ನೀರು ಹಾಳಾಗುವುದು. ಶಿಕ್ಷಣ ಸಂಸ್ಥೆ ಮತ್ತು ಶಿಕ್ಷಣದ ಗುಣಮಟ್ಟಕ್ಕೆ ಶಿಕ್ಷಕರೇ ಮೂಲಸ್ತಂಭ. ವಿದ್ಯಾರ್ಥಿಗಳ ಮನಸ್ಸಿನ ಮೇಲೆ, ವ್ಯಕ್ತಿತ್ವದ ಮೇಲೆ ಪರಿಣಾಮ ಬೀರುವವರು ಪ್ರಧಾನವಾಗಿ ಶಿಕ್ಷಕರು ಮತ್ತು ತಂದೆತಾಯಿಗಳು ಅಥವಾ ಪೋಷಕರು. ಪಾಠ ಮಾಡಿದರೆ ನಮ್ಮ ಕರ್ತವ್ಯ ಮುಗಿಯಿತು ಎಂದು ಶಿಕ್ಷಕರು ಹೇಳುವಂತಿಲ್ಲ; ಮಕ್ಕಳ ಪಾಲನೆ ಪೋಷಣೆಗೆ ಎಲ್ಲಾ ವ್ಯವಸ್ಥೆಯನ್ನೂ ಮಾಡುವುದರೊಂದಿಗೆ ತಮ್ಮ ಕರ್ತವ್ಯ ಮುಗಿಯಿತೆಂದು ಪೋಷಕರು ಭಾವಿಸಲಾಗದು. ಮಕ್ಕಳು, ವಿದ್ಯಾರ್ಥಿಗಳು ನಾವು ಹೇಳುವ ಮಾತಿಗೆ ಗಮನ ಕೊಡುವುದಿಲ್ಲ, ನಾವು ಮಾಡುವುದನ್ನು ಗಮನಿಸುವರು. ಶಿಕ್ಷಕರ ಮತ್ತು ಪೋಷಕರ ಜೀವನ ಮತ್ತು ಆದರ್ಶ ಅವರ ಮೇಲೆ ಪ್ರಭಾವ ಬೀರುವುದು. ಪೋಷಕರು ತಮ್ಮ ಮಕ್ಕಳ ಬಗ್ಗೆ ದೂರುವಾಗ ಅವರು 'ತಮ್ಮ' ಮಕ್ಕಳೆಂಬುದನ್ನು ನೆನಪಿಡಬೇಕು. 'ಮಕ್ಕಳು ಅರ್ಧ ಭಾಗ ನಿಮ್ಮಂತೆ ಇರುವರು, ಮಿಕ್ಕ ಒಂದು ಭಾಗವೂ ನಿಮ್ಮಂತೆಯೇ ಆಗಬೇಕೆಂದು ಬಯಸುವಿರಾ?' ಎಂದು ಅನುವಂಶಿಕತೆಯ (ಜೆನೆಟಿಕ್ಸ್) ವಿಜ್ಞಾನಿಗಳೊಬ್ಬರು ಉದ್ಗರಿಸಿದರು. ವಿದ್ಯಾರ್ಥಿಗಳು ತಮ್ಮ ತಂದೆತಾಯಿಗಳನ್ನು ಕೃತಜ್ಞತೆಯಿಂದ ನೆನೆಯುವಂತೆ ಒಳ್ಳೆಯ ಉಪಾಧ್ಯಾಯರನ್ನೂ ನೆನೆಯುವರು. ಅಧ್ಯಾಪಕರು ವಿದ್ಯಾರ್ಥಿಗಳೊಂದಿಗೆ ಶಾಲಾ ಸಮಯದಲ್ಲಿ ಮಾತ್ರ ಬೆರೆಯುವರು. ಪೋಷಕರು ಮಕ್ಕಳ ಮೇಲೆ ಬೀರಿರುವ ಪ್ರಭಾವವನ್ನು ಅವರು ಬದಲಾಯಿಸಲಾರರು. ನೈತಿಕತೆ, ಶೀಲ ತಂದೆತಾಯಿಗಳಿಂದ ಮಕ್ಕಳಿಗೆ ಬರುವುದು. ವಿದ್ಯಾಭ್ಯಾಸದಲ್ಲಿ ಶ್ರದ್ಧೆ, ಆಸಕ್ತಿ, ಶಿಸ್ತು ಮುಂತಾದವು ಉಪಾಧ್ಯಾಯರಿಂದ ಬರುವುವು. ಇವೆಲ್ಲ ಎಳೆಯ ವಯಸ್ಸಿನಲ್ಲಿ ಆಗುವುದರಿಂದ ಬಲವಾಗಿ ನಿಲ್ಲುವುವು.

ನಮಗಿಂದು ಬೇಕಾದುದು ವೈಜ್ಞಾನಿಕ ದೃಷ್ಟಿ, ನಿಷ್ಪಕ್ಷಪಾತಿಗಳಾಗಿ ಸತ್ಯಾನ್ವೇಷಕರಾಗುವುದು, ಸರಿಯಾದ ಕಾರಣಗಳನ್ನು ಕಂಡು ಹಿಡಿಯುವುದು. ಇದಕ್ಕೆ ಬೇಕಾದುದು ಶಿಕ್ಷಣದ ಮೇಲೆ ಗೌರವ ಮತ್ತು ಶ್ರದ್ಧೆ. ಇವನ್ನು ರೂಢಿಸುವುದರಿಂದ ನಮ್ಮ ವ್ಯಕ್ತಿತ್ವ ದೃಢವಾಗಿ ವಿಕಾಸವಾಗುವುದು, ನಮ್ಮ ಶೀಲ ನಿರ್ಮಾಣವಾಗುವುದು. ''ಭರತಖಂಡದ ಎಲ್ಲ ಸಮಸ್ಯೆಗಳಿಗೂ ವಿದ್ಯಾಭ್ಯಾಸವೊಂದೇ ಪರಿಹಾರ... ಯಾವ ವಿದ್ಯೆ ಅನುದಿನ ಜೀವನದ ಹೋರಾಟಕ್ಕೆ ಬೇಕಾಗುವ ಸಲಕರಣೆಗಳನ್ನು ಸಾಧಾರಣ ಜನರಿಗೆ ಒದಗಿಸಿ ಕೊಡಲಾರದೋ, ಯಾರಲ್ಲಿ ಶೀಲಶಕ್ತಿಯನ್ನು ವ್ಯಕ್ತವಾಗುವಂತೆ ಮಾಡಲಾರದೋ, ಯಾರಿಗೆ ಸಿಂಹಸದೃಶ ಧೈರ್ಯವನ್ನು ಒದಗಿಸಿ ಕೊಡಲಾರದೊ, ಅಂತಹ ವಿದ್ಯೆಯಿಂದ ಏನಾದರೂ ಪ್ರಯೋಜನವಿದೆಯೆ? ಯಾವ ವಿದ್ಯಾವ್ಯಾಸಂಗದಿಂದ ಒಳ್ಳೆಯ ಶೀಲ ನಮ್ಮಲ್ಲಿ ಬೆಳೆಯುವುದೋ, ಮಾನಸಿಕ ಶಕ್ತಿ ಹೆಚ್ಚುವುದೋ, ಬುದ್ಧಿ ವಿಶಾಲವಾಗುವುದೋ, ಯಾವುದರ ಸಹಾಯದಿಂದ ಸ್ವತಃ ತನ್ನ ಕಾಲ ಮೇಲೆ ನಿಲ್ಲಬಲ್ಲನೋ, ಅಂತಹ ವಿದ್ಯೆ ನಮಗೆ ಬೇಕಾಗಿರುವುದು'' ಎಂದು ಭರತಖಂಡದ ಪುನರುತ್ಥಾನಕ್ಕಾಗಿ ಜನ್ಮತಾಳಿದ ಸ್ವಾಮಿ ವಿವೇಕಾನಂದರು ನಮ್ಮ ದೇಶದ ವಿದ್ಯಾಭ್ಯಾಸಕ್ಕೆ ಇರಬೇಕಾದ ಗುರಿಯನ್ನು ತಿಳಿಸಿಕೊಟ್ಟಿರುವರು. ಸತ್ಯಾನ್ವೇಷಣೆ ಧೀರರ ಕೆಲಸ; ಇತರರು ಇದನ್ನು ಮಾಡಲಾರರು. ಅವರ ತ್ಯಾಗ ಮತ್ತು ಪರಿಶ್ರಮದ ಫಲವನ್ನು ಅನುಭವಿಸುತ್ತಿರುವ ನಾವು ಅವರ ಅನ್ವೇಷಣೆಯ ಫಲವನ್ನು ಇತರರಿಗೆ ಧಾರೆಯೆರೆಯುವ ಮೂಲಕ ಅವರ ಋಣವನ್ನು ತೀರಿಸಬೇಕು.





# ಸ್ವಾಮಿ ಅಖಂಡಾನಂದರ ಸ್ಮೃತಿಸಂಚಯ

ಬಂಗಾಳಿ ಮೂಲ: **ಸ್ವಾಮಿ ನಿರಾಮಯಾನಂದ** ಕನ್ನಡಕ್ಕೆ: **ಕುಮಾರಿ ಪಿ.ಉಷಾ**

## ಭಾಗ ೧೭

**೨೮ ಜನವರಿ, ೧೯೩೭:** ಸ್ವಾಮಿ ಅಖಂಡಾನಂದರು 'ಸ್ಮೃತಿಕಥೆ'ಯನ್ನು ಬರೆಯುತ್ತಿದ್ದ ಸೇವಕನಿಗೆ ಹೇಳುತ್ತಿದ್ದಾರೆ: ''೧೮೯೭ ರಲ್ಲಿ ಒಂದು ವರ್ಷ ಕಾಲ ರಿಲೀಫ್ (ಬರ ಪರಿಹಾರ ಕಾರ್ಯ) ನಡೆಯಿತು. ಆಗ ೧೪ ವರ್ಷಗಳ ಕಾಲ ರಸ್ತೆಯ ಬದಿಯಲ್ಲೇ ಆಶ್ರಮವಿತ್ತು; ಅನಂತರ ೧೯೧೨ ರಲ್ಲಿ ಇಲ್ಲಿ (ಸಾರಗಾಛಿಯಲ್ಲಿ) ೫೦ ಬಿಘಾ ಜಮೀನಿನಲ್ಲಿ ಈ ಆಶ್ರಮವನ್ನು ಸ್ಥಾಪಿಸಲಾಯಿತು.''

ಬ್ರಹ್ಮಚಾರಿಯೊಬ್ಬ ನಡೆಯುವಾಗ ಎಡವಿದ್ದರಿಂದ ಕಾಲಿಗೆ ಏಟಾಗಿತ್ತು. ಬಾಬಾ ಅವನ ಮೇಲೆ ಸಹಾನುಭೂತಿಯನ್ನೇನೂ ತೋರಿಸದೆ, ''ರಸ್ತೆ ನೋಡಿಕೊಂಡು ನಡೆ. ಮೊದಲು ನಿನ್ನ ತಪ್ಪನ್ನೇ ನೋಡಿಕೋ'' ಎಂದರು.

ಒಬ್ಬಳು ಭಕ್ತೆಯ ಪ್ರಶ್ನೆಗೆ ಉತ್ತರವಾಗಿ ಬಾಬಾ ಹೀಗೆ ಬರೆಯಲು ಹೇಳಿದರು: ''ನೀನು ಬಹಳ ಕಷ್ಟವನ್ನು ಅನುಭವಿಸುತ್ತಿದ್ದೀಯೆಂದು ತಿಳಿದು ನನಗೆ ತುಂಬ ದುಃಖವಾಗುತ್ತಿದೆ. ಯಾವಾಗಲೂ 'ನಾನು ಚೆನ್ನಾಗಿರುತ್ತೇನೆ; ಈಗ ಚೆನ್ನಾಗಿದ್ದೇನೆ' ಎಂದೇ ಭಾವಿಸು. 'ಇಲ್ಲ, ಇಲ್ಲ' ಎಂದು ಖಂಡಿತವಾಗಿ ಹೇಳಿಕೊಂಡರೆ ಹಾವಿನ ವಿಷವೂ ಇಳಿದುಹೋಗುವುದು ಎಂದು ಠಾಕೂರರು ಹೇಳುತ್ತಿದ್ದರು.''

ಸಂಜೆ ಕೆಲವು ಮಂದಿ ಭಕ್ತರು ಕಾಶೀಪುರದ ಘಟನೆಗಳನ್ನು ಕೇಳಬಯಸಿದರು. ತುಂಬ ಹೊತ್ತು ಮೌನವಾಗಿದ್ದ ನಂತರ ಬಾಬಾ ಹೇಳಿದರು:

''ಕಾಶೀಪುರದಲ್ಲಿ ಠಾಕೂರರಿಗೆ ಒಂದು vision (ದರ್ಶನ) ಉಂಟಾಯಿತು. ಚಿಕ್ಕ ಬಾಲಕನೊಬ್ಬ ಮುತ್ತಿನ ಹಾರವನ್ನು ವಿತರಿಸುತ್ತಿದ್ದಾನೆ. ಮೊದಮೊದಲಿಗೆ ಏನು ಮಾಡಿದರೂ ಕೊಡುತ್ತಿರಲಿಲ್ಲ, ಕೊನೆಗೆ ಎಲ್ಲರನ್ನೂ ಕರೆದುಕರೆದು ಕೊಡಲಾರಂಭಿಸಿದ.'' ಬೇರೆ ಏನನ್ನೂ ಹೇಳದೆ, ಇನ್ನೂ ಸ್ವಲ್ಪ ಹೊತ್ತಿನ ನಂತರ ಹೇಳಿದರು: ''ನೀವು ತಣ್ಣನೆಯ ನೆಲದಲ್ಲಿ ಕುಳಿತರೆ ನನ್ನ ಮೈ ಉರಿಯುತ್ತದೆ. ಯಾರ ಕಾಲಿಗಾದರೂ ಮುಳ್ಳು ಚುಚ್ಚಿದರೆ ಅದು ನನ್ನ ಶರೀರಕ್ಕೆ ತಗಲುತ್ತದೆ. ಈಚೆಗೆ ಕೆಲವು ವರ್ಷಗಳಿಂದ ನಿಜವಾಗಿಯೂ ನನಗೆ ಹೀಗಾಗುತ್ತಿದೆ.''

ಸ್ವಲ್ಪ ಸಮಯದ ನಂತರ ಆ ಗಂಭೀರಭಾವ ಕಳೆದುಹೋಯಿತು. ಬಾಬಾ ಹೇಳಿದರು: ''ನಾವು ಎಷ್ಟೊಂದು ಕಷ್ಟಪಟ್ಟು 'ಮಹಾರಾಜ್' ಆದೆವು! ಆದರೆ ಈಗ ಎರಡು ದಿನಗಳ ಹುಡುಗನೂ 'ಮಹಾರಾಜ್', ೫೦ ವರ್ಷ ವಯಸ್ಸಿನ ಸಾಧುವೂ 'ಮಹಾರಾಜ್'! ಇನ್ನು ಹೇಗೆ ಕರೆಯಬಹುದು ಹೇಳು?'' ಆಗ ಒಬ್ಬರೆಂದರು 'ಯುವರಾಜ್' ಅಂತ. ಆಗ ಅಲ್ಲಿದ್ದವರೆಲ್ಲರೂ ನಗತೊಡಗಿದರು.

ಆಗ ಬಾಬಾ ಹೇಳಿದರು, ''ಇಲ್ಲ ಪರಸ್ಪರ 'ದಾದಾ' (ಅಣ್ಣ) ಎಂದು ಕರೆಯಬೇಕು. ಭ್ರಾತೃಭಾವ ಅರಳಬೇಕು. 'ಮಹಾರಾಜ್' ಎಂಬ ಪದ ಬಹಳ ಔಪಚಾರಿಕವಾಗಿ ತೋರುತ್ತದೆ. ಅದರಿಂದ ನಿಕಟವಾದ ಸಂಬಂಧ ಬರುವುದಿಲ್ಲ.

''ಸಂನ್ಯಾಸಿ ಮುಂಡನ ಮಾಡಿಸಿಕೊಳ್ಳಬೇಕು; ತಲೆಗೂದಲು, ಗಡ್ಡ ಎಲ್ಲವನ್ನೂ ತೆಗೆಯಬೇಕು. ಬ್ರಹ್ಮಚಾರಿಯೂ ಹಾಗೆಯೇ ಮಾಡಿದರೆ, ಅವರಿಬ್ಬರಿಗೂ ವ್ಯತ್ಯಾಸವೇನು? ಬ್ರಹ್ಮಚಾರಿ ತಲೆಗೂದಲು, ಗಡ್ಡ ಇಟ್ಟುಕೊಳ್ಳಬೇಕು. ಹಾಗಿಲ್ಲದಿದ್ದರೆ ಪಶ್ಚಿಮ (ಭಾರತ) ದಲ್ಲಿ ಬಹಳ ನಿಂದಿಸುತ್ತಾರೆ.

''ಈ ವಿಷಯ ಹೇಳಿದಾಗ ಅನೇಕರು ಕೇಳುತ್ತಾರೆ, 'ನಿಮ್ಮ ತಲೆಯಲ್ಲಿ ಕೂದಲೇಕೆ?' ಅಂತ. ಅದಕ್ಕೆ ಕಾರಣವಿದೆ. ನನ್ನ ಹಣೆಯ ಮೇಲೆ ದೊಡ್ಡದೊಂದು ಗಾಯದ ಕಲೆಯಿದೆ, ಚಿಕ್ಕ ವಯಸ್ಸಿನ ತುಂಟತನದ ಚಿಹ್ನೆ. ಹೊಸ್ತಿಲಿಗೆ ಹಣೆ ತಗಲಿ ಗಾಯವಾಗಿತ್ತು. ನಾವು ಇಬ್ಬರು, ಮೂವರು ಬೇರೊಬ್ಬನನ್ನು ಹೆದರಿಸುತ್ತಿದ್ದೆವು. ಅವನಿಗದು ತಿಳಿದು, ನಮ್ಮನ್ನು ಅಟ್ಟಿಸಿಕೊಂಡು ಬಂದ. ಅವನಿಂದ ತಪ್ಪಿಸಿಕೊಂಡು ಓಡುವಾಗ ಬಿದ್ದುಬಿಟ್ಟಿದ್ದೆ.

''ಆದರೂ ಟಿಬೆಟ್ಟಿನಲ್ಲಿ ಹರಿತವಾದ ಕಬ್ಬಿಣದ ಅಲಗಿನಿಂದ ಕ್ಷೌರಮಾಡಿಕೊಳ್ಳುತ್ತಿದ್ದೆ. ನನ್ನ ಬೋಳುತಲೆ ಥಳಥಳಿಸುತ್ತಿತ್ತು. ನಿವೇದಿತಾ ಮೊದಲ ಬಾರಿ ಬೋಳುತಲೆಯನ್ನು ನೋಡಿ ಕಿರುಚಿದಳು– ' Horrible! Convict!' ಎಂದು. ಅವರ ದೇಶದಲ್ಲಿ ಜೈಲಿನಲ್ಲಿ ಕೈದಿಗಳ ತಲೆ ಬೋಳಿಸುತ್ತಾರಂತೆ. ಅಂದಿನಿಂದ ಸ್ವಾಮೀಜಿ ನಿಯಮವನ್ನು ಮಾಡಿದರು, ತಲೆಯ ಮೇಲೆ ಟೋಪಿ ಅಥವಾ ಪಗಡಿಯನ್ನು ಧರಿಸಿಯೇ ಹೊರಗೆ ಓಡಾಡಬೇಕು ಎಂದು.

''Barkenhead ಎಂಬುದೊಂದು ಬ್ರಿಟಿಷ್ ಸೇನಾನೌಕೆ. ೧೮೫೨ರಲ್ಲಿ ಸಮುದ್ರದ ಆಳದಲ್ಲಿ ಅಡಗಿದ್ದ ಬಂಡೆಗೆ ಹೊಡೆದು ಮುಳುಗಿ ಹೋಗುತ್ತಿತ್ತು. ಆಗ ಕ್ಯಾಪ್ಟನ್‌ನ ಆದೇಶದಂತೆ ಸೇನೆ ಹಾಗೂ ನಾವಿಕ ವರ್ಗದವರು ಸಾಲಾಗಿ ನಿಂತು, ರಾಷ್ಟ್ರಗೀತೆ ಹಾಡುತ್ತ ಮುಳುಗಿದರು. ಮಹಿಳೆಯರು ಹಾಗೂ ಮಕ್ಕಳನ್ನು ದೋಣಿಗಳಲ್ಲಿ ದಡ ಸೇರಿಸಲಾಯಿತು.'' ಹಡಗು ಮುಳುಗಿದ ಕತೆಯನ್ನು ಹೇಳಿ ಮುಗಿಸಿದ ಬಾಬಾ, ''ಎಂಥ ಡಿಸಿಪ್ಲಿನ್!'' ಎಂದರು.

ಜರ್ಮನಿಯ ರಾಜ ಕೈಸರ್‌ನ ಬಾಲ್ಯದ ಕಥೆಯನ್ನು ಬಾಬಾ ಹೇಳಿದರು. ''ಕೈಸರ್ ಬಾಲಕನಾಗಿದ್ದಾಗ ನೀರಿಗೆ ಹೆದರುತ್ತಿದ್ದ.

ಸ್ನಾನ ಮಾಡಲು ಹಿಂಜರಿಯುತ್ತಿದ್ದ. ಆತನ ತಂದೆ ಏನು ಮಾಡುವು ದೆಂದು ಆಲೋಚಿಸಿದ. 'Guard of honour' ನಿಲ್ಲಿಸಿಬಿಟ್ಟರು. ಅಂದಿನಿಂದ ಅವನಿಗೆ ಪ್ರತಿದಿನ ನೀರು ಎಂದರೆ ಎಲ್ಲಿಲ್ಲದ ಉತ್ಸಾಹ.

''ಆತ್ಮ ಗೌರವಕ್ಕೆ ಧಕ್ಕೆಯಾದರೆ ಚಿಕ್ಕ ಮಗುವಿಗೂ ಅರ್ಥವಾಗು ತ್ತದೆ. ಅದನ್ನು ಜಾಗೃತಗೊಳಿಸಿ ಬೇಕಾದಂತೆ ಉಪಯೋಗಿಸಿಕೊಳ್ಳ ಬೇಕು.'' ಕೆಲವು ದಿನಗಳಿಂದ ಬಾಬಾ ಬಹಳ ಅಸ್ವಸ್ಥರಾಗಿದ್ದಾರೆ. 'ದೇಹಾರೋಗ್ಯ ಹೇಗಿದೆ?' ಎಂಬ ಪ್ರಶ್ನೆಗೆ, ''ದೇಹಾರೋಗ್ಯವೆ? **'ಶರೀರಮಾದ್ಯಂ ಖಲು ಧರ್ಮಸಾಧನಮ್'' ಎಂದರು.** ಸ್ವಲ್ಪ ನಂತರ, '' **'ಧರ್ಮಾರ್ಥಕಾಮಮೋಕ್ಷಾಣಾಂ ಆರೋಗ್ಯಂ ಮೂಲ ಮುತ್ತಮಮ್'** ಆದರೂ ಇನ್ನೊಂದಿದೆ, ಗೊತ್ತೆ? ಎಳೆಯ ಎಲುಬು, ಹಾಗೂ ಬಲಿತ ಎಲುಬು ಅಂತ. ಮೂರ್ತಿ ಆಗುವ ತನಕ ಅಚ್ಚು ಇರಬೇಕು. ಏನೆನ್ನುತ್ತಿ?'' ಎಂದರು.

**೨೫ ಜನವರಿ, ೧೯೩೭:** ಮಾರನೆಯ ದಿನ ಬೆಳಿಗ್ಗೆ ಬಾಬಾ ಅವರ ದೇಹ ತುಂಬ ದುರ್ಬಲವಾಗಿತ್ತು. ಅವರು ಗಂಭೀರಭಾವದಿಂದ ಕುಳಿತಿದ್ದರು. ಕುಶಲ ಪ್ರಶ್ನೆಗಳನ್ನು ಕೇಳಿದಾಗ ಹೇಳಿದರು, ''ಕಣ್ಣು ಹೊರಳಿಸಿದರೂ ಸಾಕು. ಏನು ಹೇಳುತ್ತೀಯಾ? ಇನ್ನು ಉಳಿದಿರುವು ದಾದರೂ ಏನು? ಮಾ ತಾರಾ, ಶಿವಸುಂದರಿ !''

**೩೦ ಜನವರಿ, ೧೯೩೭:** ಸಂಜೆ ಒಬ್ಬಿಬ್ಬರು ಭಕ್ತ ಸೇವಕರು ಬಾಬಾ ಬಳಿಯೇ ಇದ್ದರು. ಬಾಬಾ ಹೇಳಿದರು: ''ಯಾವಾಗಲೂ ಗುರು ನೀಡಿದ ಮಂತ್ರವನ್ನು ಜಪಿಸಬೇಕು. 'ಶಯನೇ ಪ್ರಣಾಮ ಜ್ಞಾನ್, ನಿದ್ರಾಯ್ ಕೊರೋ ಮಾಕೇ ಧ್ಯಾನ್' *(ಮಲಗಿದಾಗಲೆಲ್ಲ ಪ್ರಣಾಮ ಎಂದೂ, ನಿದ್ರಿಸಿದಾಗಲೆಲ್ಲ ಜಗನ್ಮಾತೆಯ ಧ್ಯಾನ ಮಾಡು ತ್ತಿದ್ದೇನೆ ಎಂದೂ ಭಾವಿಸು)* – ಈ ಭಾವನೆ ಚೆನ್ನಾಗಿದೆ!''

''ಹೃಷೀಕೇಶದ ಕಡೆ ಸ್ವಾಮೀಜಿಯನ್ನು ಯಾರೋ ಕೇಳಿದರು, ನೀವು 'ಗಿರಿ'ಯೆ, ಅಥವಾ 'ಪುರಿ'ಯೆ? (ಸಂನ್ಯಾಸ ಸಂಪ್ರದಾಯ ಯಾವುದು ಎಂದು.) ಅದಕ್ಕೆ ಸ್ವಾಮೀಜಿ, 'ಕಚುರಿ' (ಪೂರಿಯಂಥ ತಿಂಡಿ) ಎಂದರು. ದಶನಾಮಿ (ಸಂಪ್ರದಾಯ)ಯವರಿಗೆ – ಗಿರಿ, ವನ ಪರ್ವತ, ಸಾಗರ, ಆಶ್ರಮ ಎಂದೆಲ್ಲ ಇವೆ.'' ಕುರ್ಚಿಯಿಂದ ಏಳುತ್ತ ಬಾಬಾ, ''ಕೈ ನಡುಗುತ್ತಿದೆ, ಕಾಲು ಅದರುತ್ತಿದೆ'' ಎಂದರು.

**೩೧ ಜನವರಿ, ೧೯೩೭:** 'ಸ್ಮೃತಿಕಥೆ'ಯನ್ನು ಬರೆಯುತ್ತಿದ್ದ ಸೇವಕನಿಗೆ ಬಾಬಾ ಹೇಳುತ್ತಿದ್ದಾರೆ: ''ಸಂಜೆಯ ವೇಳೆ ದೈನಂದಿನ ಜಪ, ಪ್ರಾರ್ಥನೆಗಳನ್ನು ಮಾಡಿದ ತಕ್ಷಣವೇ ಬಂದು ಬಿಡು. ನನ್ನ ಭಾವನೆಗಳು, 'ಸ್ಮೃತಿಕಥೆ' ನಿನ್ನ ಮೂಲಕ ಬರೆಯಲ್ಪಡುತ್ತಿದೆ; ಇದೇನು ಧ್ಯಾನ, ಜಪಗಳಿಗಿಂತ ಕಡಿಮೆಯೆ? ಇದೂ ಠಾಕೂರರ ಕೆಲಸವೇ.'' ಸ್ವಲ್ಪ ಹೊತ್ತು ಸುಮ್ಮನಿದ್ದು ಕೆಲವು ವಿಷಯಗಳನ್ನು ಜ್ಞಾಪಿಸಿಕೊಳ್ಳುತ್ತ ಹೇಳುತ್ತಿದ್ದಾರೆ: ''ಜಾಮ್‌ನಗರದಲ್ಲಿ ಸೇವಾ ವ್ರತದ ಸೂಚನೆ, ಖೇತ್ರಿಯಲ್ಲಿ ಅದರ ವಿಕಾಸ, ಮುರ್ಷಿದಾಬಾದಿನಲ್ಲಿ ಪರಿಸಮಾಪ್ತಿ.''

ಬಾಬಾ ಹೇಳುತ್ತಿದ್ದಾರೆ: ''ನಿದ್ರೆಯಲ್ಲೂ ನನಗೆ ಶಾಂತಿಯಿಲ್ಲ, ಸೌಖ್ಯವಿಲ್ಲ. ಅಂದು ಕನಸಿನಲ್ಲಿ ಕಂಡಿದ್ದೇನು? ಮಯ್ನಾ (ಆಶ್ರಮದ ಒಬ್ಬ ಅನಾಥ ಶಿಶು) ಈ ಮರದ ಏಣಿಯನ್ನೇರಿ ಬಾವಿಯಲ್ಲಿ ಇಣುಕಿ ನೋಡುತ್ತಿದ್ದಾನೆ. ಆದ್ದರಿಂದಲೇ ಅವನನ್ನು ಮಂಚದ ಕೆಳಗೆ ಮಲಗಿಸಿದ್ದೇನೆ. ಎಂದಾದರೂ ಮುಳುಗಿಬಿಟ್ಟರೆ ಏನು ಮಾಡು ವುದು? ಯಾರು ನೋಡುತ್ತಿರುತ್ತಾರೆ, ಹೇಳು? ಯಾರಿಗಾದರೂ ಪ್ರಜ್ಞೆ ಇದೆಯೇನು?''

* * *

ಬಾಬಾ ಹೇಳುತ್ತಿದ್ದಾರೆ: ''ಬೇಲೂರಿನಲ್ಲಿ ಸ್ವಾಮೀಜಿ ಒಂದು ದಿನ ಅಲೆಮಾರಿ ದಿನಗಳ ಕಥೆಗಳನ್ನು ಹೇಳುತಿದ್ದರು. ನಡುನಡುವೆ ನಾನು ಸ್ವಾಮೀಜಿಯವರು ಮರೆತುಬಿಟ್ಟಿದ್ದ ಘಟನೆಗಳನ್ನು ನೆನ ಪಿಸುತ್ತಿದ್ದೆ. ಆಗ ಅವರು ನನಗೆ, 'ಅನವಶ್ಯಕ ಮಾತನಾಡುತ್ತಿದ್ದೀ. ಮೌನವಾಗಿ ಕುಳಿತು ಧ್ಯಾನ ಮಾಡು' ಎಂದರು. ನಾನು ಹಾಗೆಯೇ ಮಾಡುತ್ತಿದ್ದರೂ ಸ್ವಾಮೀಜಿಗೆ ಸಮಾಧಾನವಿಲ್ಲ. ಆಗ ಹಿಮಾಲಯದ ಒಂದು ಕಥೆಯ ನಡುವೆ 'ಮಹಾಶೋಲ್' ಮೀನಿನ ವಿಚಾರ ಬಂತು. ಅವರು ನನ್ನನ್ನು ಕೇಳಿದರು, 'ಏನಪ್ಪ, ಆ ಮೀನು ಎಷ್ಟು ದೊಡ್ಡದಾಗಿತ್ತು, ಹೇಳು?' ಆಗ ನಾನು ಎಷ್ಟೊಂದು ಧ್ಯಾನಮಗ್ನ ನಾಗಿದ್ದೆನೆಂದರೆ, ಕಣ್ಣುಗಳನ್ನು ಮುಚ್ಚಿಕೊಂಡೇ ಎರಡು ಕೈಗಳಿಂದ 'ಇಷ್ಟು ದೊಡ್ಡದು' ಎಂದು ಸನ್ನೆಮಾಡಿ ತೋರಿಸಿದೆ. ನಾನು ಮತ್ತೆ ಧ್ಯಾನಮಗ್ನನಾದೆ. ಆಗ ಎಲ್ಲರೂ ನಕ್ಕರು.''

**೧ ಫೆಬ್ರವರಿ, ೧೯೩೭:** ಬೆಳಗ್ಗೆ ಪ್ರಣಾಮ ಮಾಡಲು ಹೋದಾಗ ಬಾಬಾ ಹೇಳಿದರು: ''ನನ್ನ ದೇಹ ಬಹಳ ದುರ್ಬಲವಾಗಿದೆ. ಹೊರಟೆ ಪ್ರಭು, ಹೊರಟೆ.'' ಸ್ವಲ್ಪ ಹೊತ್ತಾದ ಮೇಲೆ ಭಕ್ತಿ ಹಾಗೂ ಅನ್ನಪೂರ್ಣಾ(ಅಮೆರಿಕದ ಇಬ್ಬರು ಮಹಿಳೆಯರು) ಇವರಿಗೆ ಎರಡು ಪತ್ರಗಳನ್ನು ಬರೆದು, ಅವರ ಕೊಲಂಬೊ ವಿಳಾಸಕ್ಕೆ ಕಳು ಹಿಸಲು ಹೇಳಿದರು. ಫೆಬ್ರವರಿ ೮ರಂದು ಅವರು ಅಲ್ಲಿಂದ ಅಮೆ ರಿಕಾಗೆ ಹೋಗುವ ಹಡಗನ್ನು ಏರಲಿದ್ದಾರೆ, ಅದಕ್ಕಾಗಿ ಆ ಪತ್ರ.

**೨ ಫೆಬ್ರವರಿ, ೧೯೩೭:** ಇಂದು ಮಂಗಳವಾರ. ಈ ದಿನ ಸ್ವಾಮೀಜಿ ಜಯಂತಿಯ ಉತ್ಸವ. ಬೆಳಗ್ಗೆ ಬಾಬಾಗೆ ಪ್ರಣಾಮ ಮಾಡಿದಾಗ ಅವರು, ''ಜೈ ಗುರು, ಜೈ ಸ್ವಾಮಿ ವಿವೇಕಾನಂದ '' ಎಂದರು. ಅತ್ತ ಪೂಜೆ, ಉತ್ಸವಗಳು ಚೆನ್ನಾಗಿ ನಡೆಯುತ್ತಿದ್ದವು. ಇತ್ತ ಸುಮಾರು ಹನ್ನೆರಡು, ಒಂದು ಗಂಟೆಯ ಹೊತ್ತಿಗೆ ಬಹರಾಂಪುರದ ಭಕ್ತೆಯೊಬ್ಬಳು ಅನೇಕ ಹೂಗಳನ್ನು ತಂದು, ಅವುಗಳಿಂದ ಬಾಬಾ ಅವರ ಪಾದಗಳಿಗೆ ಪುಷ್ಪಾಂಜಲಿ ನೀಡಲು ಮುಂದಾದಳು. ಬಾಬಾ ಮೊದಲು ಅವಳನ್ನು ತಡೆಯುತ್ತ, ''ಅರೆ, ಹೂಗಳನ್ನು ಠಾಕೂರರಿಗೆ ಅರ್ಪಿಸು!'' ಎಂದರು. ಭಕ್ತೆ ದೃಢವಾಗಿ, ಆದರೂ ಮೃದುವಾಗಿ ಹೇಳಿದಳು: ''ನೀವೇ ನಮ್ಮ ಪಾಲಿಗೆ ಠಾಕೂರರು.'' ಹೀಗೆಂದ ಕೂಡಲೇ ಬಾಬಾ ಅವರ ಭಾವದಲ್ಲಿ ಬಹಳ ಬದಲಾವಣೆಯುಂಟಾ ಯಿತು. ಪುಷ್ಪಾಂಜಲಿಯ ಹೂವನ್ನೆಲ್ಲ ಅವರು ಸ್ವೀಕರಿಸಿ, ತುಸು ಆವೇಶಭರಿತರಾಗಿ, ''ಥ್ಯಾಂಕ್ಯೂ, ಥ್ಯಾಂಕ್ ಯೂ'' ಎಂದರು. ಪಕ್ಕದಲ್ಲಿದ್ದ ಸೇವಕರಿಬ್ಬರು ತಮ್ಮತಮ್ಮಲ್ಲೇ ಮಾತನಾಡಿಕೊಂಡರು, 'ಇದು ಒಳ್ಳೆಯ ಸೂಚನೆಯಲ್ಲ. ಇವು ಠಾಕೂರರ ಮಾತುಗಳು, 'ವಚನವೇದ'ದಲ್ಲಿ ಹೀಗೇ ಇದೆ. ಠಾಕೂರರ ನಿಜ ಸ್ವರೂಪವನ್ನು

ಗುರುತಿಸಿ, ''ಆತನೇ (ಆ ಭಗವಂತನೇ) ನೀವು'' ಎಂದಾಗ ಠಾಕೂರರು ''ಥ್ಯಾಂಕ್ಯೂ, ಥ್ಯಾಂಕ್ ಯೂ'' ಎಂದಿದ್ದರು.

ದಿನವೆಲ್ಲ ಭಾವಾವಸ್ಥೆಯಲ್ಲಿ ಕಳೆಯಿತು. ಬಾಬಾ ಏನನ್ನೂ ತಿಂದಿಲ್ಲ. ಸಂಜೆ ಆರತಿ ಮುಗಿದ ನಂತರ, ಸೇವಕ ಆರತಿಯ ದೀಪವನ್ನು ಬಾಬಾ ಹತ್ತಿರ ತಂದಾಗ, ಅವರು ಭಕ್ತಿಪೂರ್ವಕ ಅದರ ತಾಪವನ್ನು ತೆಗೆದುಕೊಂಡರು. ಅನಂತರ ಅವರು ಮಲಗಲು ಹೋದರು. ಸೇವಕನೊಬ್ಬ ಅವರ ಮೈ,ಕೈ ಹಾಗೂ ಕಾಲುಗಳನ್ನು ಒತ್ತತೊಡಗಿದ. ಅಡುಗೆಮನೆಯ ಸೇವಕ, ''ಏನು ಆಹಾರ ಸೇವಿಸುತ್ತೀರಿ?' ಎಂದು ಕೇಳಿದ. ಬಾಬಾ ಮೊದಲು ಯಾವ ಆಗ್ರಹವನ್ನೂ ಸೂಚಿಸದೆ, ಕಡೆಗೆ ಸೇವಕನು ವಿನಂತಿಸಿಕೊಂಡಾಗ ಅನೇಕ ಪದಾರ್ಥಗಳನ್ನು ತಿನ್ನುವುದಾಗಿ ಹೇಳಿದರು. ಇತರ ದಿನಗಳಲ್ಲಿ ಅವರು ೯ ಗಂಟೆಗೆ ಕರೆಯುತ್ತಿದ್ದರು. ಇಂದು ೧೦-೧೦ ಗಂಟೆಯಾಗಿದೆ, ಸೇವಕ ಎರಡು ಬಾರಿ ಬಂದು ಮರಳಿಹೋದ. ಕೊನೆಗೊಮ್ಮೆ ಕೇಳಿದ, ''ಹೊತ್ತಾಗಿದೆ. ಊಟ ಮಾಡುವುದಿಲ್ಲವೆ?'' ಬಾಬಾ ಹೇಳಿದರು, ''ತಿನ್ನಲು ನೀನೇನು ಕೊಡುವೆ? ನನ್ನ ಮನಸ್ಸು ಸ್ವರ್ಗಕ್ಕೆ ಹೊರಟುಹೋಗಿತ್ತು. ಹಸಿವು, ಬಾಯಾರಿಕೆ ಇಲ್ಲ. ಸ್ವಾಮೀಜಿ ಜೊತೆಗೆ ಓಡಾಡುತ್ತಿದ್ದೆ. ಅಲ್ಲಿ ಎಷ್ಟು ಒಳ್ಳೊಳ್ಳೆಯ ವಸ್ತುಗಳನ್ನು ಸೇವಿಸಿದೆ, ಸ್ವಾಮೀಜಿ ನನಗೆ ಅಮೃತವನ್ನೇ ಕುಡಿಸಿದರು. ನೀನೇನು ಕೊಡುವೆ?''

ಬಾಬಾ ಮಲಗಿಯೇ ಮಾತನಾಡುತ್ತಿದ್ದಾರೆ. ಮಾತುಗಳು ಸ್ವಲ್ಪ ಗಲಿಬಿಲಿಯಾಗಿದೆ. ಈಗ ಸೇವಕ ಸ್ವಲ್ಪ ಜೋರಾಗಿಯೇ ಹೇಳಿದ, ''ಊಟಮಾಡುತ್ತೀರೋ ಇಲ್ಲವೋ ಹೇಳಿ. ಮಾಡುವುದಿಲ್ಲವಾದರೆ ತೆಗೆದುಕೊಂಡು ಹೋಗುತ್ತೇನೆ.'' ಬಾಬಾ ಎದ್ದು ಕುಳಿತು, ''ನೀನು ಎಷ್ಟೊಂದು ಕಷ್ಟಪಟ್ಟು ತಯಾರಿಸಿದ್ದೀಯೆ, ತೆಗೆದುಕೊಂಡು ಬಾ, ತಿನ್ನುತ್ತೇನೆ'' ಎಂದರು. ಟೇಬಲ್ ಇಡಲಾಯಿತು. ತಟ್ಟೆಗಳಲ್ಲಿ ಬಗೆಬಗೆಯ ಪದಾರ್ಥಗಳನ್ನು ಸಜ್ಜುಗೊಳಿಸಲಾಯಿತು. ಬಾಬಾ ಎಲ್ಲವನ್ನೂ ಬೆರಳಿನಿಂದ ಮುಟ್ಟಿ, ಒಂದೊಂದಾಗಿ ನಾಲಗೆಗೆ ಮುಟ್ಟಿಸಿಕೊಂಡು, ''ನಾನು ತಿಂದಾಯಿತು, ತೆಗೆದುಕೊಂಡು ಹೋಗು'' ಎಂದರು.

ದಿನವಿಡೀ ಈ ರೀತಿ ಕಷ್ಟಪಟ್ಟು ಊಟಮಾಡಿದ್ದನ್ನು ನೋಡಿದ ಸೇವಕ ಆಶ್ಚರ್ಯದಿಂದ ಮೌನವಾಗಿ ಹೊರಟುಹೋದ. ರಾತ್ರಿ ೧೨ ಗಂಟೆಯವರೆಗೆ ಸೌದೆ ಒಲೆಯ ಹತ್ತಿರ ಕುಳಿತುಕೊಂಡು ನಾನಾ ಊಹಾಪೋಹಗಳನ್ನು ಮಾಡತೊಡಗಿದ.

**೩ ಫೆಬ್ರವರಿ, ೧೯೩೭:** ಬುಧವಾರ ಬೆಳಗ್ಗೆ ಬಾಬಾ ಬಹಳ ಸಂತೋಷದಿಂದಿದ್ದಾರೆ. ''ಏನು, ಎಲ್ಲರಿಗೂ ಭಯವಾಯಿತೆ?'' ಎಂದು ಕೇಳಿದರು. ನಂತರ ತಾವೇ ಹೇಳಿದರು, ''ಇಲ್ಲ, ಇಲ್ಲ, ಹಾಗೇನೂ ಇಲ್ಲ.'' ನಂತರ ಹೆಣ್ಣುಮಕ್ಕಳ ವಿದ್ಯಾಭ್ಯಾಸ, ಭಾವ-ಭಕ್ತಿ ಹಾಗೂ ಸಾಧನೆ, ಭಜನೆಗಳ ಬಗ್ಗೆ ಮಾತನಾಡಿದರು. ಕೊನೆಗೆ ಮೀರಾಬಾಯಿ ಕುರಿತೂ ಮಾತನಾಡಿದರು.

**೪ ಫೆಬ್ರವರಿ, ೧೯೩೭:** ಗುರುವಾರ, ಬೆಳಗ್ಗೆ ಚಹಾಗೆ ತಾವೇ ೨-೩ ಚಮಚ ಸ್ಯಾಕರೀನ್ ಹಾಕಿದರು.

ಆ ದಿನ ಬಂದ ಮನಿಆರ್ಡರ್‌ನಲ್ಲಿ ಸಹಿ ಹಾಕಲು ಹೋಗಿ ಮರಗಟ್ಟಿದ ಕೈಗಳಿಂದ A-k-h ಈ ಅಕ್ಷರಗಳನ್ನು ಒಂದರ ಮೇಲೊಂದಾಗಿ ಬರೆಯುತ್ತಿರುವುದನ್ನು ನೋಡಿದ ಸೇವಕ, ತಾನೇ ಸಹಿ ಹಾಕಿ ಅಂಚೆಯವನನ್ನು ಅಲ್ಲಿಂದ ಕಳುಹಿಸಿದ. ೨-೩ ಗಂಟೆಯ ವೇಳೆಗೆ ಅತಿಥಿಗೃಹದ ನಿರ್ಮಾಣಕ್ಕಾಗಿ ಇಂಜಿನಿಯರುಗಳ ಜತೆ ಸ್ವಲ್ಪ ಮಾತುಕತೆ ನಡೆಯಿತು. ಆದರೆ ಪ್ಲ್ಯಾನನ್ನು ನೋಡಲಾರಂಭಿಸಿದಾಗ, ತುಂಬಾ ಕೈ ನಡುಗುತ್ತದೆ ಎಂದು ಅವರನ್ನು ಬೀಳ್ಕೊಂಡು ಮಲಗಿದರು.

ಸಂಜೆ ೪-೫ ಗಂಟೆಯ ಸುಮಾರಿಗೆ ಬಾಬಾ ಹೊರಗಡೆ ವರಾಂಡದಲ್ಲಿ ಕುರ್ಚಿಯಲ್ಲಿ ಕುಳಿತಿದ್ದರು. ಹತ್ತಿರವೇ ಒಬ್ಬಿಬ್ಬರು ಭಕ್ತರಿದ್ದರು. ಬಾಬಾ ಹೇಳಿದರು, ''ಯಾರೆಲ್ಲ ಇಲ್ಲಿದ್ದೀರೊ, ಕೊನೆಯ ಗಳಿಗೆಯಲ್ಲಿ ನನ್ನ ಸೇವೆ ಮಾಡುತ್ತಿರುವಿರೋ, ಅವರು ನನ್ನ ಸ್ವಂತದವರು. ಅವರಿಗೆ ಬೇಕಾಗಿರುವುದು ನಾನು ಮಾತ್ರ, ಇನ್ನೇನೂ ಬೇಡ. ಯಾರಿಗೆ ಬೇರೇನೂ ಬೇಡವೋ, ಅವರಿಗೆ ಎಲ್ಲವೂ ದೊರೆಯುತ್ತದೆ.''

**೫ ಫೆಬ್ರವರಿ, ೧೯೩೭:** ಇಂದು ಶುಕ್ರವಾರ. ಕೆಲವು ದಿನಗಳಿಂದ ಬಹಳ ಸಿದ್ಧತೆ ನಡೆಯುತ್ತಿತ್ತು. ಇಂದು ಬೆಳಗ್ಗೆ ಮೂವರಿಗೆ ಮ್ಯಾಜಿಕ್ ಲಾಟೀನನ್ನು ತೆಗೆದುಕೊಂಡು ಹಳ್ಳಿಗಳಿಗೆ ಹೋಗಲು ಹೇಳಿದರು. ೮ ಗಂಟೆಯ ಹೊತ್ತಿಗೆ ಬಾಬಾ ತೃಪ್ತಿಯಿಂದ ಅವರು ಹೋಗುವುದನ್ನೇ ನೋಡುತ್ತ, ''ನೋಡಿ ಎಷ್ಟು ಉತ್ಸಾಹದಿಂದ ಅವರು ಹೋಗುತ್ತಿದ್ದಾರೆ!'' ಎಂದರು.

* * *

ಸ್ವಲ್ಪ ಹೊತ್ತಿನ ನಂತರ 'ಸ್ಮೃತಿಕಥೆ'ಯ ಹಸ್ತಪ್ರತಿನ್ನು ತರಲು ಹೇಳಿದರು. ಅದನ್ನು ತಂದಾಗ, ''ಜಾಮ್‌ನಗರದಲ್ಲಿ ಸೇವಾವ್ರತದ ಸೂಚನೆ, ಖೇತ್ರಿಯಲ್ಲಿ ಅದರ ವಿಕಾಸ, ಮುರ್ಷಿದಾಬಾದಿನಲ್ಲಿ ಅದರ ಪ್ರಸಾರ ಹಾಗೂ ಪರಿಣತಿ'' ಎಂದು ಬರೆಯಲು ಹೇಳಿದರು.

ಅನಂತರ ಬಾಬಾ ತಾವೇ ತಮ್ಮ ಸಾಕ್ಸ್‌ಗಳನ್ನು ತೆಗೆಯಹೊರಟರು, ಆದರೆ ಸಾಧ್ಯವಾಗಲಿಲ್ಲ. ಸೇವಕ ಅವುಗಳನ್ನು ತೆಗೆದಾಗ, ''ಮಲಗುತ್ತೇನೆ'' ಎಂದರು. ಇಬ್ಬರು ಸೇವಕರು ಅವರನ್ನು ಹಿಡಿದು ಹಾಸಿಗೆಯಲ್ಲಿ ಮಲಗಿಸಿದರು. ಬಾಬಾ, ''ಗಾಳಿ ಬೀಸಿ'' ಎಂದರು. ಆಮೇಲೆ, ''ಎಲ್ಲರನ್ನೂ ಕರೆಯಿರಿ'' ಎಂದರು. ಆಗ ೧೦ ಗಂಟೆ. ಎಲ್ಲರೂ ಕೋಣೆಯೊಳಗೆ ಬಂದಾಗ, ''ನಿಮ್ಮಲ್ಲಿ ಏನೇನು ಭಾವನೆಗಳಿವೆಯೋ ಎಲ್ಲವೂ ನನಗೆ ಸ್ಪಷ್ಟವಾಗಿ ಕಾಣಿಸುತ್ತಿವೆ, ಗಾಜಿನ ಕಪಾಟಿನಂತೆ. ನಾನು ಎಲ್ಲರಿಗೂ ಆಶೀರ್ವಾದವನ್ನು ಮಾಡಿ ಹೋಗುತ್ತಿದ್ದೇನೆ. ನಾನೇಕೆ ಮೋಸ ಮಾಡಲಿ? ನನಗೆ ಸೇವೆಯನ್ನು ಮಾಡಿದವರಿಗೂ, ಕಷ್ಟವನ್ನು ಕೊಟ್ಟವರಿಗೂ, ಹತ್ತಿರದಲ್ಲಿರುವವರಿಗೂ, ದೂರದಲ್ಲಿರುವವರಿಗೂ - ಎಲ್ಲರಿಗೂ ಆಶೀರ್ವಾದ ಮಾಡುತ್ತಿದ್ದೇನೆ. ಎಲ್ಲರಿಗೂ ಶುಭವಾಗಲಿ'' ಎಂದರು.

ಈ ಮಾತುಗಳನ್ನಾಡಿ ಬಾಬಾ ಮಲಗಿದರು. ಇದೇ ಅವರ ಚಿರಕಾಲದ ನಿದ್ರೆಯಾಯಿತು. *(ಮುಗಿಯಿತು)*



# ರಾಮಕೃಷ್ಣ ತಪೋವನ

(ರಾಮಕೃಷ್ಣ ಮಠ ಹಾಗೂ ರಾಮಕೃಷ್ಣ ಮಿಷನ್, ಬೇಲೂರು ಮಠ, ಪಶ್ಚಿಮ ಬಂಗಾಳ
ಇದರ ಮಾರ್ಗದರ್ಶನದಲ್ಲಿ ನಡೆಯುವ **ಕರ್ನಾಟಕ ರಾಮಕೃಷ್ಣ-ವಿವೇಕಾನಂದ ಭಾವ ಪ್ರಚಾರ ಪರಿಷತ್** ಇದರ ಸದಸ್ಯತ್ವ ಹೊಂದಿದ ಸಂಸ್ಥೆ)

## ರಾಮಕೃಷ್ಣ ತಪೋವನ ಬಾಲಕಾಶ್ರಮ, ಪೊಳಲಿಯಲ್ಲಿ ಉಚಿತ ವಸತಿ ಸೌಲಭ್ಯ :

**ಅರ್ಜಿ ಆಹ್ವಾನ**

ಆರ್ಥಿಕವಾಗಿ ಹಿಂದುಳಿದ ಮತ್ತು ನಾನಾ ಕಾರಣಗಳಿಂದ ವಿದ್ಯಾಭ್ಯಾಸವನ್ನು ಮುಂದುವರಿಸಲು ಸಾಧ್ಯವಾಗದ ಗ್ರಾಮೀಣ ಪ್ರತಿಭಾವಂತ ಹುಡುಗರಿಗೆ ಶಿಕ್ಷಣಕ್ಕೆ ನೆರವಾಗುವ ಅನ್ವಯ **ರಾಮಕೃಷ್ಣ ತಪೋವನ ಬಾಲಕಾಶ್ರಮವು** ಅರ್ಜಿ ಆಹ್ವಾನಿಸಿದೆ.

ದಕ್ಷಿಣ ಕನ್ನಡ, ಉಡುಪಿ, ಕಾಸರಗೋಡು ಹಾಗೂ ನೆರೆಯ ಜಿಲ್ಲೆಗಳ, 7 ನೇ ತರಗತಿಯಲ್ಲಿ ಉತ್ತಮ ಶ್ರೇಣಿಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳು 8ನೇ ತರಗತಿಗೆ ಸೇರಬಹುದು. ಉಚಿತ ಶಿಕ್ಷಣ, ಊಟ ಮತ್ತು ವಸತಿ ಒದಗಿಸಲಾಗುವುದು. ಜೊತೆಗೆ ಭಜನೆ, ಸಂಗೀತ, ಯಕ್ಷಗಾನ, ತೋಟಗಾರಿಕೆ, ಕಂಪ್ಯೂಟರ್, ಶ್ರಮಸೇವೆ, ಭರತನಾಟ್ಯ ಇತ್ಯಾದಿ ತರಬೇತಿ ನೀಡಲಾಗುತ್ತದೆ. ಸುಂದರ ಹಳ್ಳಿಯ ಪರಿಸರದಲ್ಲಿ ಈ ಬಾಲಕಾಶ್ರಮವಿದ್ದು, ಆಸಕ್ತಿಯಿದ್ದ ಹುಡುಗರು 7ನೇ ತರಗತಿಯ ಪರೀಕ್ಷೆ ಮುಗಿದ ಕೂಡಲೇ ವೈಯಕ್ತಿಕ ವಿವರಗಳೊಂದಿಗೆ ದೂರವಾಣಿ ಇಲ್ಲವೆ ಅಂಚೆಯ ಮೂಲಕ ಸಂಪರ್ಕಿಸಬಹುದು. ಬಾಲಕಾಶ್ರಮದ ಪರಿಚಯ-ಮಾಹಿತಿಗಾಗಿ ವಿದ್ಯಾರ್ಥಿಗಳು ಒಂದು ವಾರ ಬಾಲಕಾಶ್ರಮದಲ್ಲಿ ಉಳಿದುಕೊಳ್ಳಬೇಕಾಗುತ್ತದೆ. ಮಕ್ಕಳ ಮೇಲ್ವಿಚಾರಣೆಯನ್ನು ಸ್ವತಃ ಸ್ವಾಮೀಜಿಯವರೇ ವಹಿಸಿಕೊಳ್ಳುವರು.

ಹೆಚ್ಚಿನ ಮಾಹಿತಿಗಾಗಿ ಸಂಪರ್ಕಿಸಬೇಕಾದ ವಿಳಾಸ : **ರಾಮಕೃಷ್ಣ ತಪೋವನ, ಶ್ರೀರಾಜರಾಜೇಶ್ವರಿ ದೇವಸ್ಥಾನದ ಬಳಿ,**
**ಕರಿಯಂಗಳ ಗ್ರಾಮ, ಪೊಳಲಿ ಅಂಚೆ,**
**ಬಂಟ್ವಾಳ ತಾಲೂಕು, ದಕ್ಷಿಣ ಕನ್ನಡ - 574219**

ಸಂಪರ್ಕಿಸಬಹುದಾದ ದೂರವಾಣಿ ಸಂಖ್ಯೆ : 9845165108, 0824-2016455, 2266655



# ಶ್ರೀರಾಮಕೃಷ್ಣ ಶಾರದಾಶ್ರಮ, ಪೊನ್ನಂಪೇಟೆ - 571216, ಕೊಡಗು ಜಿಲ್ಲೆ

Phone : 08274-249040, 249555; Email: srkseva@gmail.com; Website: rkmponnampet.org

## ವಸಂತ ವಿಹಾರ

**(ಬೇಸಿಗೆ ರಜದಲ್ಲಿ ಗಂಡುಮಕ್ಕಳಿಗಾಗಿ ಮೌಲ್ಯವರ್ಧನಾ ಕಾರ್ಯಾಗಾರ)**

**17.4.2016 ರಿಂದ 24.4.2016**

ಪ್ರಿಯ ಸ್ನೇಹಿತರೇ,

ಪೊನ್ನಂಪೇಟೆಯ ಆಶ್ರಮದ ಆವರಣದಲ್ಲಿ ಭಗವಾನ್ ಶ್ರೀರಾಮಕೃಷ್ಣರ ಭವ್ಯವಾದ ವಿಶ್ವಭಾವೈಕ್ಯ ಮಂದಿರವನ್ನು ನಿರ್ಮಿಸಲಾಗಿದೆ. ಈ ದೇವಾಲಯವನ್ನು ಕೇಂದ್ರಬಿಂದುವಾಗಿಟ್ಟುಕೊಂಡು, ಹಲವಾರು ಸೇವಾಕಾರ್ಯಗಳನ್ನು ಆಶ್ರಮವು ನಡೆಸುತ್ತಿದೆ. 11 ರಿಂದ 15 ವರ್ಷ ವಯಸ್ಸಿನ ಶಾಲಾ ಮಕ್ಕಳಿಗಾಗಿ '**ವಸಂತ ವಿಹಾರ**' ಎಂಬ ಬೇಸಿಗೆ ಶಿಬಿರವನ್ನು 17.4.2016 ರಿಂದ 24.4.2016 ರ ವರೆಗೆ ನಡೆಸಲಿದ್ದೇವೆ. ಈ ಶಿಬಿರವು ಬೆಳಗಿನಿಂದ ಸಂಜೆಯವರೆಗೆ ಇರುತ್ತದೆ. ಪರಸ್ಥಳಗಳಿಂದ ಬರುವ ಮಕ್ಕಳಿಗೆ ಆಶ್ರಮದಲ್ಲಿ ಮತ್ತು ಹತ್ತಿರದ ಕೆಲವು ಆವಾಸಿ ಶಾಲೆಗಳಲ್ಲಿ ತಂಗುವ ವ್ಯವಸ್ಥೆಯನ್ನೂ ಮಾಡಲಿದ್ದೇವೆ. ಮಕ್ಕಳಿಗೆ ಯೋಗಾಸನ, ಪ್ರಾಣಾಯಾಮ, ಏಕಾಗ್ರತೆಯನ್ನು ಬೆಳೆಸಿಕೊಳ್ಳುವ ವಿಧಾನ, ವ್ಯಕ್ತಿತ್ವ ವಿಕಾಸ, ಮೌಲ್ಯಶಿಕ್ಷಣ, ಪ್ರಾರ್ಥನೆ ಮುಂತಾದವುಗಳನ್ನು ಹೇಳಿಕೊಡಲಾಗುವುದು. ನಿಮ್ಮ ಮಕ್ಕಳನ್ನು ಈ ಕಾರ್ಯಕ್ರಮಕ್ಕೆ ಕಳುಹಿಸಿಕೊಡುವುದರಿಂದ ನಮ್ಮ ಸನಾತನ ಧರ್ಮದ ಮೌಲ್ಯಗಳ ಬಗ್ಗೆ ಅವರಿಗೆ ಅರಿವು ಮೂಡುತ್ತದೆ. ಸ್ವಾಮಿ ವಿವೇಕಾನಂದರ ಆಶಯದಂತೆ ಅವರನ್ನು ಯೋಗ್ಯ, ಉಪಯುಕ್ತ ಪ್ರಜೆಗಳನ್ನಾಗಿ ರೂಪಿಸುವುದೇ ನಮ್ಮ ಉದ್ದೇಶ.

**ಶಿಬಿರ ಶುಲ್ಕ :** ವಸತಿ ರಹಿತ : ರೂ.350/- ; ವಸತಿ ಸಹಿತ : ರೂ.700/- ನೋಂದಾಯಿಸಿಕೊಳ್ಳಲು ಕೊನೆಯ ದಿನಾಂಕ : 12.4.2016

**1) 11ರಿಂದ 15 ವರ್ಷ ವಯಸ್ಸಿನ ಗಂಡುಮಕ್ಕಳಿಗೆ ಮಾತ್ರ. 2) ಖಾಲಿ ಕಾಗದದಲ್ಲಿ ವಿದ್ಯಾರ್ಥಿಯ ಹೆಸರು, ವಯಸ್ಸು, ತರಗತಿ, ತಂದೆತಾಯಿಗಳ ಹೆಸರು, ವಿಳಾಸ, ಲ್ಯಾಂಡ್ ಫೋನ್ ಮತ್ತು ಮೊಬೈಲ್ ಫೋನ್ ನಂಬರುಗಳನ್ನು ಬರೆದು, ಡಿ.ಡಿ. ಮೂಲಕ ಹಣವನ್ನು ಆಶ್ರಮಕ್ಕೆ ಕಳುಹಿಸಿರಿ.**

RTGSಗಾಗಿ ಬ್ಯಾಂಕ್ ವಿವರಗಳು: Sri Ramakrishna Sharadashrama, Ponnampet. SB. A/c.no.003200101013023. IFSC Code : CORP0000032 (ಹಾಗೂ, ಪತ್ರ ಅಥವಾ ಇಮೇಲ್ ಮೂಲಕ ವಿವರಗಳನ್ನು ತಿಳಿಸಿರಿ.)

ಪ್ರೀತಿ ಮತ್ತು ಶುಭಾಶಯಗಳೊಂದಿಗೆ,

**ಭಗವತ್ಸೇವೆಯಲ್ಲಿ ತಮ್ಮವ**

**ಸ್ವಾಮಿ ಬೋಧಸ್ವರೂಪಾನಂದ**

ಅಧ್ಯಕ್ಷರು

ಪುಸ್ತಕ ಪರಿಚಯ

ಸ್ವಾಮೀಜಿ ಕವಿತೆಗಳ ಅನುವಾದ ಸಂಕಲನ

# 'ಹಾಡು ಚಾಗಿಯ ಹಾಡನು'




ಶೀರ್ಷಿಕೆ: **ಹಾಡು ಚಾಗಿಯ ಹಾಡನು**

*(ಸ್ವಾಮಿ ವಿವೇಕಾನಂದರ ಕವಿತೆಗಳು)*

ಅನುವಾದಕರು: **ಡಾ. ಎಚ್.ಎನ್.ಮುರಳೀಧರ**

ಪ್ರಕಾಶಕರು: **ವಿವೇಕಹಂಸ ಪ್ರಕಾಶನ,**

569, 3 ನೇ ಅಡ್ಡರಸ್ತೆ, ಶ್ರೀನಿವಾಸನಗರ

2ನೇ ಹಂತ, ಬೆಂಗಳೂರು 560050

ಫೋನ್: 26696388

ಪುಟಗಳು: iv+90 ; ಬೆಲೆ : ₹ 75

ಸ್ವಾಮಿ ವಿವೇಕಾನಂದರು ಆಧುನಿಕ ಭಾರತದ ಅರುಣೋದಯದಲ್ಲಿ ಉದಯಿಸಿ ಬಂದ ಮಹಾನ್ ದಾರ್ಶನಿಕ, ಆಧ್ಯಾತ್ಮಿಕ ಪ್ರಭೆ. ಅವರ ಅಸಾಮಾನ್ಯ ದೈವೀವ್ಯಕ್ತಿತ್ವ ಪೂರ್ವ-ಪಶ್ಚಿಮಗಳೆರಡನ್ನೂ ಬೆಳಗುವ ಶಕ್ತಿಯಾಗಿ ಮಿಂಚಿತು. ಬಾಲ್ಯದಿಂದಲೇ ಹತ್ತು ಹಲವು ಗುಣಗಳನ್ನು ಮೈಗೂಡಿಸಿಕೊಂಡಿದ್ದ ಸ್ವಾಮೀಜಿ ಆಗಾಗ ಬರೆದ ಕವನಗಳು ಅವರ ಕಾವ್ಯಪ್ರತಿಭೆಯ ಅಪೂರ್ವ ಕುರುಹಾಗಿ ನಿಲ್ಲುತ್ತವೆ. ಅವರು ಬಂಗಾಳಿ, ಆಂಗ್ಲ ಹಾಗೂ ಸಂಸ್ಕೃತ ಭಾಷೆಗಳಲ್ಲಿ ರಚಿಸಿದ ಕವನ, ಸ್ತೋತ್ರ, ಹಾಡುಗಳನ್ನು ಕನ್ನಡಕ್ಕೆ ಸಮರ್ಥವಾಗಿ ಅನುವಾದಿಸಿದ್ದಾರೆ, ಡಾ. ಹೆಚ್.ಎನ್.ಮುರಳೀಧರ ಅವರು. ರಾಮಕೃಷ್ಣ-ವಿವೇಕಾನಂದ ಸಾಹಿತ್ಯ ಕ್ಷೇತ್ರದಲ್ಲಿ ಈಗಾಗಲೇ ಸಾಕಷ್ಟು ಸೇವೆ ಸಲ್ಲಿಸಿರುವ ಅವರು ದಿವ್ಯತ್ರಯರ ಕೃಪಾವಾರಿಧಿಯಲ್ಲಿ ಮಿಂದವರು; ಸಾಹಿತ್ಯ ಕ್ಷೇತ್ರದ ವಿವಿಧ ಮಜಲುಗಳಲ್ಲಿ ಸಾಕಷ್ಟು ಅಧ್ಯಯನ ಮಾಡಿದವರು. ಮೂಲ ಕವಿತೆಗಳ ಭಾವಕ್ಕೆ ಸ್ವಲ್ಪವೂ ಭಂಗವುಂಟಾಗದಂತೆ, ಸಾಹಿತ್ಯ ದೃಷ್ಟಿಯಿಂದ ಕಾವ್ಯದ ಸೌಂದರ್ಯ, ನವಿರು, ಲಯಬದ್ಧತೆಗಳ ಸುಂದರ ಮೇಳವನ್ನು ಈ ಅನುವಾದದಲ್ಲಿ ಮೈಗೂಡಿಸಿಕೊಂಡಿದ್ದಾರೆ. ಲೇಖಕರು ತಮ್ಮ ಪ್ರಸ್ತಾವನೆಯಲ್ಲಿ ಹೇಳುತ್ತಾರೆ, ''ಎಷ್ಟೋ ಸಲ ಸ್ವಾಮೀಜಿಯವರ ಉಪನ್ಯಾಸಗಳೂ ಕೂಡ ಭಾವಸಾಂದ್ರತೆಯ ಕೆಲವು ಸಂದರ್ಭದಲ್ಲಿ ಕಾವ್ಯಾತ್ಮಕ ನಿರೂಪಣೆಯ ದಾರಿಯನ್ನು ಹಿಡಿದಿರುವುದುಂಟು. ಹೀಗಿರುವಾಗ ಕಾವ್ಯರೂಪದಲ್ಲಿಯೇ ಅಭಿವ್ಯಕ್ತಿಯನ್ನು ಪಡೆಯುವ ಸಂದರ್ಭದಲ್ಲಿ ಅವರ ತಾತ್ತ್ವಿಕತೆ ಕೂಡ ಹೊಸ ಹೊಳಹುಗಳನ್ನು ಪ್ರಕಟಿಸುವುದೆಂಬ ಸಂಗತಿಯನ್ನು ಪ್ರತ್ಯೇಕವಾಗಿ ಹೇಳುವ ಅಗತ್ಯವಿಲ್ಲ.'' *(ಪ್ರಸ್ತಾವನೆ, ಪು. x )*

ಸ್ವಾಮೀಜಿ ಕವಿತೆ ಕನ್ನಡದ ನರುಗಂಪಿನೊಂದಿಗೆ ಅನುವಾದಗೊಂಡಿರುವ ಪರಿ ಹೀಗೆ:

ಹಿಂದುಮುಂದೆಲ್ಲವನು ಪರಿಕಿಸಲು ಕಾಣುವೆನು –
ಎಲ್ಲ ಸರಿಯಿರುವುದೆಂದು;
ಆಳದಾಳದ ಕಹಿಯ ಅಳಲಿನಲು ಕಾಣುತಿಹೆ
ಬೆಳಗುತಿಹ ಕಿರಣವೊಂದು! *('ಬೆಳಕು', ಪು.೩೩)*

ಸ್ವಾಮಿ ವಿವೇಕಾನಂದರ ಕೆಲವು ಪ್ರಸಿದ್ಧ ಕವಿತೆಗಳನ್ನು ಈ ಹಿಂದೆಯೇ ಕುವೆಂಪು, ಜಿ.ಎಸ್.ಶಿವರುದ್ರಪ್ಪ ಮೊದಲಾದವರು ಅನುವಾದಿಸಿದ್ದಾರೆ. ಅವುಗಳನ್ನು ಈ ಸಂಕಲನದ ಕೊನೆಯಲ್ಲಿ ನೀಡಲಾಗಿದೆ. (ಇದರೊಂದಿಗೆ ಸ್ವಾಮೀಜಿಯವರ 'Kali the Mother' ಎಂಬ ಪ್ರಸಿದ್ಧ ಕವಿತೆಯ ಬೇಂದ್ರೆ ಅನುವಾದ 'ರೌದ್ರಿ'ಯನ್ನೂ ಸೇರಿಸಿದ್ದರೆ ಚೆನ್ನಾಗಿರುತ್ತಿತ್ತು.)

ಈ ಕೃತಿ ಕೇವಲ ಅನುವಾದ ಕವಿತೆಗಳ ಸಂಕಲನವಷ್ಟೇ ಅಲ್ಲ; ಒಂದು ಉತ್ತಮ ಅಧ್ಯಯನಯೋಗ್ಯ ಕೃತಿಯಾಗಿದೆ. ಸ್ವಾಮಿ ವಿವೇಕಾನಂದರ ವ್ಯಕ್ತಿತ್ವದ ಅಂತರಂಗವನ್ನು ಅರಿಯಬಯಸುವವರು ಅವರ ಕವಿತೆಗಳ ಒಳಹೊಕ್ಕು ನೋಡುವುದು ಅತ್ಯಗತ್ಯ. ಇದಕ್ಕೆ ಅನುಕೂಲವಾಗುವಂತೆ ಪ್ರತಿಯೊಂದು ಕವಿತೆಗಳಿಗೂ ಅಗತ್ಯವಾದ ಮಾಹಿತಿ ಒದಗಿಸುತ್ತಾರೆ. ಎಲ್ಲ ಕವಿತೆಗಳಿಗೂ ಸಂಕ್ಷಿಪ್ತವಾದ, ವಿವರಣೆ, ವಿಮರ್ಶೆ, ಹಾಗೂ ವಿಶ್ಲೇಷಣೆಗಳನ್ನು ಗ್ರಂಥದ ಕೊನೆಯಲ್ಲಿ ನೀಡುತ್ತಾರೆ. *('ಟಿಪ್ಪಣಿಗಳು', ಪು. ೭೬)* ಆರಂಭದಲ್ಲಿ ಬರುವ ಸ್ವಾಮಿ ಜಗದಾತ್ಮಾನಂದಜಿಯವರ ಮುನ್ನುಡಿ, ಕೃತಿಯ ಕೊನೆಗೆ ಬರುವ ವಿದ್ವಾಂಸರುಗಳ ಹಿನ್ನುಡಿಗಳು ಕೃತಿಯ ಮೌಲ್ಯಕ್ಕೆ ಮೆರಗು ನೀಡುತ್ತವೆ; ಕೃತಿಯ 'ಪಕ್ಷಿನೋಟ' ಪರಿಚಯವನ್ನೂ ಮಾಡಿಸುತ್ತವೆ. ಸುಂದರ ಮುದ್ರಣ, ವಿನ್ಯಾಸಗಳಿಂದ ಮನಸೆಳೆಯುವ ಈ ಕೃತಿ, ಕನ್ನಡದಲ್ಲಿ ರಾಮಕೃಷ್ಣ - ವಿವೇಕಾನಂದರ ಸಾಹಿತ್ಯರಾಶಿಗೆ ಒಂದು ಅಮೂಲ್ಯ ಸೇರ್ಪಡೆಯಾಗಿದೆ. 

# ದಯೆ



✣ ದಯೆ ಮತ್ತು ಮಾಯೆ ಇವೆರಡೂ ಬೇರೆ ಬೇರೆ. ಮಾಯೆ ಎಂದರೆ, ಆತ್ಮೀಯ ಮಮತೆ. ಉದಾಹರಣೆಗೆ ತಂದೆತಾಯಿ, ಸೋದರಸೋದರಿ, ಹೆಂಡತಿ ಮಕ್ಕಳು ಅವರ ಮೇಲೆ ಇಟ್ಟಿರುವ ಪ್ರೀತಿ. ದಯೆ ಎಂಬುದು ಸರ್ವಭೂತಗಳಲ್ಲಿಯೂ ಇಟ್ಟಿರುವ ಪ್ರೀತಿ; ಸಮದೃಷ್ಟಿ. ಯಾರಲ್ಲಾದರೂ ದಯೆ ಕಂಡುಬರುವುದಾದರೆ, ಉದಾಹರಣೆಗೆ ವಿದ್ಯಾಸಾಗರ, ಆಗ ಅರಿತುಕೊಳ್ಳಬೇಕು, ಅದು ಭಗವಂತನ ದಯೆ ಎಂಬುದಾಗಿ. ದಯೆಯಿಂದ ಎಲ್ಲಾ ಭೂತಗಳ ಸೇವೆ ಸಾಧ್ಯ. ಮಾಯೆಯೂ ಭಗವಂತನಿಗೆ ಸೇರಿದುದು. ಮಾಯೆಯಿಂದ ಭಗವಂತ ಆತ್ಮೀಯರ ಸೇವೆಯನ್ನು ಮಾಡುವಂತೆ ಮನುಷ್ಯನನ್ನು ಪ್ರೇರೇಪಿಸುತ್ತಾನೆ. ಆದರೆ ಇದನ್ನು ಚೆನ್ನಾಗಿ ಜ್ಞಾಪಕದಲ್ಲಿಡಬೇಕು; ಮಾಯೆ ನಮ್ಮನ್ನು ಅಜ್ಞಾನದಿಂದ ಆವೃತ್ತರಾಗುವಂತೆ, ಬಂಧನಕ್ಕೆ ಸಿಲುಕುವಂತೆ ಮಾಡಿಬಿಡುತ್ತದೆ. ಆದರೆ ದಯೆ ಕ್ರಮೇಣ ನಮಗೆ ಚಿತ್ತಶುದ್ಧಿಯನ್ನು ತಂದು ನಮ್ಮನ್ನು ಮುಕ್ತರನ್ನಾಗಿ ಮಾಡುತ್ತದೆ.

✣ ದಯಾವಂತನಾಗಿರುವುದು ಬಹಳ ಒಳ್ಳೆಯದೆ. ದಯೆಗೂ ಮಾಯೆಗೂ ಅಜಗಜಾಂತರ. ದಯೆ ಒಳ್ಳೆಯದು, ಆದರೆ ಮಾಯೆ ಅಲ್ಲ. ಮಾಯೆ ಅಂದರೆ, ಆತ್ಮೀಯರ ಮೇಲೆ–ಹೆಂಡತಿ, ಪುತ್ರ, ಸೋದರ, ಸೋದರಿ, ಸೋದರ ಮಕ್ಕಳು, ತಂದೆತಾಯಿ, ಇವರ ಮೇಲೆ ಇರುವ ಪ್ರೀತಿ. ದಯೆ ಎಂದರೆ ಸರ್ವಭೂತಗಳಲ್ಲಿಯೂ ಒಂದೇ ಸಮ ಪ್ರೀತಿ.

✣ ಮಾಸ್ಟರ್: ದಯೆಯೂ ಒಂದು ಬಂಧನವೆ?

ಶ್ರೀರಾಮಕೃಷ್ಣರು: ಅದು ಬಹಳ ದೂರದ ಮಾತು. ದಯೆ ಸತ್ತ್ವಗುಣದಿಂದ ಉಂಟಾಗುತ್ತದೆ. ಸತ್ತ್ವಗುಣದಿಂದ ಪಾಲನೆ, ರಜೋಗುಣದಿಂದ ಸೃಷ್ಟಿ , ತಮೋಗುಣದಿಂದ ಸಂಹಾರ. ಆದರೆ ಬ್ರಹ್ಮ ಈ ಮೂರು ಗುಣಗಳಿಗೂ ಅತೀತ. ಪ್ರಕೃತಿಗೆ ಅತೀತ.

✣ 'ಇದು ನನಗೆ ಸೇರಿದ್ದು, ಇದು ನನಗೆ ಸೇರಿದ್ದು' ಎಂಬುದಾಗಿ ಈ ವಸ್ತುಗಳನ್ನು ಪ್ರೀತಿಸುವುದಕ್ಕೇ ಮಾಯೆ ಅಂತ ಹೆಸರು. ಆದರೆ ಎಲ್ಲವನ್ನೂ ಪ್ರೀತಿಸುವುದಕ್ಕೆ ದಯೆ ಅಂತ ಹೆಸರು. ಕೇವಲ ಬ್ರಾಹ್ಮ ಸಮಾಜದವರನ್ನು ಪ್ರೀತಿಸುವುದಕ್ಕೆ ಅಥವಾ ಕೇವಲ ತನ್ನ ಪರಿವಾರದವರನ್ನು ಪ್ರೀತಿಸುವುದಕ್ಕೆ ಮಾಯೆ ಅಂತ ಹೆಸರು; ಕೇವಲ ಸ್ವದೇಶದವರನ್ನು ಪ್ರೀತಿಸುವುದಕ್ಕೆ ಮಾಯೆ ಅಂತ ಹೆಸರು. ಆದರೆ ಎಲ್ಲಾ ದೇಶದ ಜನರನ್ನು ಪ್ರೀತಿಸುವುದಕ್ಕೆ ಎಲ್ಲಾ ಧರ್ಮಗಳ ಜನರನ್ನೂ ಪ್ರೀತಿಸುವುದಕ್ಕೆ ದಯೆ ಅಂತ ಹೆಸರು. ಈ ವಿಧದ ಪ್ರೀತಿ ದಯೆಯಿಂದ ಉಂಟಾಗುತ್ತದೆ. ಭಕ್ತಿಯಿಂದ ಉಂಟಾಗುತ್ತದೆ.

✣ ಮಾಯೆ ಮನುಷ್ಯನನ್ನು ಬದ್ಧನನ್ನಾಗಿಯೂ, ಭಗವದ್ವಿಮುಖನನ್ನಾಗಿಯೂ ಮಾಡಿಬಿಡುತ್ತದೆ. ಆದರೆ ದಯೆ ಭಗವಂತನ ಸಾಕ್ಷಾತ್ಕಾರವನ್ನು ದೊರಕಿಸಿಕೊಡುತ್ತದೆ. ಶುಕದೇವ ಮತ್ತು ನಾರದಾದಿಗಳು ದಯಾವಂತರಾಗಿದ್ದರು.

✣ ಯಾರಲ್ಲಿ ಅನುರಾಗ ಸಂಪತ್ತು ವಿಶೇಷವಾಗಿ ವ್ಯಕ್ತವಾಗಿದೆಯೋ ಅವರು ಭಗವಂತನ ಸಾಕ್ಷಾತ್ಕಾರಕ್ಕಾಗಿ ಇನ್ನು ಹೆಚ್ಚು ಕಾಲ ಕಾಯಬೇಕಾಗಿರುವುದಿಲ್ಲ. ಅನುರಾಗದ ಸಂಪತ್ತು ಯಾವ್ಯಾವುವು? ವಿವೇಕ, ವೈರಾಗ್ಯ, ಭೂತದಯೆ, ಸಾಧುಸೇವೆ, ಸಾಧುಸಂಗ, ಭಗವನ್ನಾಮಗುಣಕೀರ್ತನೆ, ಸತ್ಯವಚನ ಇವೇ ಮೊದಲಾದುವು. ಇವೆಲ್ಲಾ ಸಾಧಕನಲ್ಲಿ ಇರುವುದು ಕಂಡುಬಂದರೆ ನಿಸ್ಸಂದೇಹವಾಗಿ ಹೇಳಿಬಿಡಬಹುದು, ಆತನ ಭಗವತ್ಸಾಕ್ಷಾತ್ಕಾರಕ್ಕೆ ಇನ್ನು ಹೆಚ್ಚು ವಿಳಂಬವೇನಿಲ್ಲ ಎಂಬುದಾಗಿ.

✣ ಯಾರು ಅನಾಸಕ್ತಿಯಿಂದ ಕರ್ಮ ಮಾಡುತ್ತಾನೋ, ಯಾರು ದಯಾಪರನೋ ಮತ್ತು ದಾನಿಯೋ – ಆತ ತನಗೆ ಶ್ರೇಯಸ್ಸು ತಂದುಕೊಳ್ಳುತ್ತಾನೆ. ಯಾರು ಜೀವರಿಗಾಗಿ ಚಂದ್ರ, ಸೂರ್ಯ, ತಂದೆ ತಾಯಿ, ಹೂವು ಹಣ್ಣು ಧಾನ್ಯ ಸೃಷ್ಟಿಸಿದ್ದಾನೋ, ಆ ಭಗವಂತನೇ ಪರರಿಗೆ ಉಪಕಾರ ಮಾಡಲು ಪರರಿಗೆ ಶ್ರೇಯಸ್ಸನ್ನು ತರಲು ಹಕ್ಕುದಾರ. ತಾಯಿತಂದೆಗಳಲ್ಲಿ ಕಾಣಬರುವ ಒಲುಮೆ ಅದು ಆತನಿಗೆ ಸೇರಿದುದೆ; ಜೀವ ರಕ್ಷಣೆಗಾಗಿಯೇ ಆತ ಅದನ್ನು ಅವರಿಗೆ ಕೊಟ್ಟಿದ್ದಾನೆ. ದಯಾಳುವಿನಲ್ಲಿ ಕಾಣಬರುವ ದಯೆ ಆತನದೇ; ನಿಸ್ಸಹಾಯಕ ಜೀವಿಗಳ ರಕ್ಷಣೆಗಾಗಿ ಅವರಿಗೆ ಅದನ್ನು ಕೊಟ್ಟಿದ್ದಾನೆ. ನೀನು ದಯೆತೋರು, ಬಿಡು; ಆತ ಒಂದಲ್ಲ ಒಂದು ವಿಧವಾಗಿ ತನ್ನ ಕೆಲಸವನ್ನು ಮಾಡಿಸಿಕೊಂಡುಬಿಡುತ್ತಾನೆ. ಆತನ ಕಾರ್ಯ ಮಾತ್ರ ಎಂದಿಗೂ ನಿಲ್ಲದು.

✣ ಕಾಳೀದೇವಾಲಯದ ಎದುರಿಗೆ ಕೆಲವು ಸಿಖ್ ಮತದವರು ನನಗೆ ಹೇಳಿದರು, 'ಭಗವಂತ ದಯಾಮಯ' ಅಂತ. ನಾನು ಕೇಳಿದೆ, 'ಯಾರಿಗೆ ಆತ ದಯಾಮಯ?' ಅಂತ. ಅವರು ಹೇಳಿದರು, 'ಏಕೆ ಪೂಜ್ಯರೆ, ನಮ್ಮೆಲ್ಲರಿಗೂ' ಅಂತ. ನಾನು ಹೇಳಿದೆ, 'ನಾವೆಲ್ಲರೂ ಆತನ ಮಕ್ಕಳು. ಮಕ್ಕಳ ಮೇಲೆ ದಯೆ ತೋರಿಸುವುದು ಎಂದರೇನು? ಮಕ್ಕಳ ಯೋಗಕ್ಷೇಮ ನೋಡಿಕೊಳ್ಳುವುದು ತಂದೆಯ ಕರ್ತವ್ಯ; ಆತ ನೋಡಿಕೊಳ್ಳದೆ, ಪಕ್ಕದ ಕೇರಿಯವರು ಬಂದು ನೋಡಿಕೊಳ್ಳುತ್ತಾರೇನು? ಒಳ್ಳೆಯದು, ಯಾರು ಭಗವಂತ ದಯಾಮಯ ಅಂತ ಹೇಳುತ್ತಾರೊ ಅವರ ತಲೆಗೆ, ತಾವು ಭಗವಂತನ ಮಕ್ಕಳೇ ವಿನಾ ಬೇರೆ ಯಾರ ಮಕ್ಕಳೂ ಅಲ್ಲ ಎಂಬ ಭಾವನೆ ಬರುತ್ತಿಲ್ಲವೇನು?'

✣ ನಾವು ಭಗವಂತನನ್ನು ದಯಾಮಯ ಅಂತ ಸಂಬೋಧಿಸಬಾರದೇನು? ನಾವು ಸಾಧನಾವಸ್ಥೆಯಲ್ಲಿ ಇರುವವರೆಗೆ ಬೇಕಾದರೆ ಹಾಗೆ ಕರೆಯಬಹುದು. ಆದರೆ ಆತನ ಸಾಕ್ಷಾತ್ಕಾರವನ್ನು ಪಡೆದುಕೊಂಡ ಒಡನೆಯೇ, ಆತನೇ ನಮ್ಮ ಸ್ವಂತ ತಂದೆ ತಾಯಿ ಅಂತ ಬೋಧೆಯಾಗುತ್ತದೆ.

ಶ್ರೀರಾಮಕೃಷ್ಣ ವಚನವೇದದಿಂದ

# ಪಂಚಕೇದಾರ ಯಾತ್ರೆ



ಸ್ವಾಮಿ ಜ್ಞಾನಯೋಗಾನಂದ

## ಭಾಗ ೧ : ಕೇದಾರನಾಥ

**೧.ಹರಿದ್ವಾರಕ್ಕೆ :** ೨೦೧೦ನೇ ಇಸವಿಯ ಜೂನ್ ಒಂದರಂದು ನಾನು ಮತ್ತು ಸ್ವಾಮಿ ಕರುಣಾಕರಾನಂದರು ಬೆಂಗಳೂರಿನಿಂದ ಸಂಜೆ ಏಳು ಗಂಟೆಗೆ ಕರ್ನಾಟಕ ಎಕ್ಸ್‌ಪ್ರೆಸ್‌ನಲ್ಲಿ ದಿಲ್ಲಿಗೆ ಹೊರಟೆವು. ನಮ್ಮ ಯಾತ್ರೆ ಪಂಚಕೇದಾರಕ್ಕೆ ; ಅದಕ್ಕೆ ಬೇಕಾದ ಪೂರ್ವಸಿದ್ಧತೆಗಳನ್ನೆಲ್ಲ ಮಾಡಿಕೊಂಡು ದಿಲ್ಲಿಯಿಂದ ಹರಿದ್ವಾರದವರೆಗೆ ಮಾತ್ರ ನಾವು ದಿನಾಂಕ ನಿಗದಿಗೊಳಿಸಿದ್ದೆವು. ಅಲ್ಲಿಂದ ಮುಂದಕ್ಕೆ ಏನಿದ್ದರೂ ಕಾಲೋಚಿತವಾದ ತೀರ್ಮಾನ ತೆಗೆದುಕೊಂಡು ಮುಂದುವರಿಯುವುದು; ಎಷ್ಟು ದಿನ ಬೇಕಾದೀತೋ ಗೊತ್ತಿಲ್ಲ , ಇಂತಿಂಥಾ ಮಾರ್ಗದಲ್ಲಿ ಈ ರೀತಿ ಸಾಗಬೇಕು; ಎಷ್ಟು ದಿನವಾದರೂ ಆಗಲಿ ಎಂದುಕೊಂಡಿದ್ದೆವು. ಹರಿದ್ವಾರದಿಂದ ಸುಮಾರು ಹದಿನೈದು ದಿನಗಳಲ್ಲಿ ಯಾತ್ರೆ ಪೂರೈಸಬಹುದು ಎಂಬ ಅಂದಾಜನ್ನಷ್ಟೇ ನಾವು ಹೊಂದಿದ್ದೆವು.

ದಿನಾಂಕ ೩ ಜೂನ್ ಮಧ್ಯಾಹ್ನ ೧೧.೪೫ರ ಹೊತ್ತಿಗೆ ದಿಲ್ಲಿ ತಲುಪಿದೆವು. ಅಲ್ಲಿ ಸೆಖೆ ೪೭ ಡಿಗ್ರಿ ಸೆಲ್ಸಿಯಸ್, ಬೆಂದು ಹೋಗುತ್ತಿತ್ತು. ಹಾಗಾಗಿ ಅಲ್ಲಿ ತಂಗುವ ಸಾಹಸಕ್ಕೆ ಹೋಗದೆ, ದಿಲ್ಲಿ ರಾಮಕೃಷ್ಣ ಆಶ್ರಮಕ್ಕೆ ಹೋಗಿ ಮಧ್ಯಾಹ್ನ ಊಟಮಾಡಿ, ತುಸು ವಿಶ್ರಾಂತಿ ಪಡೆದು, ಮಧ್ಯಾಹ್ನ ೩.೨೦ರ 'ಜನಶತಾಬ್ದಿ ಎಕ್ಸ್‌ಪ್ರೆಸ್'ನಲ್ಲಿ ಹರಿದ್ವಾರಕ್ಕೆ ಹೊರಟೆವು. ಸಾಯಂಕಾಲ ೭.೪೫ರ ಹೊತ್ತಿಗೆ ಹರಿದ್ವಾರ ತಲುಪಿ, ರೈಲಿನಿಂದ ಇಳಿದು ಸೈಕಲ್‌ರಿಕ್ಷಾ ಮಾಡಿ ಕನಖಲ್‌ನಲ್ಲಿರುವ ರಾಮಕೃಷ್ಣಸೇವಾಶ್ರಮ ತಲುಪುವ ಹೊತ್ತಿಗೆ ರಾತ್ರಿ ಗಂಟೆ ಎಂಟಾಗಿತ್ತು.

ಮರುದಿನ ನಾವು ಕೆಲವೊಂದು ಕೆಲಸಗಳನ್ನು ಮುಗಿಸಬೇಕಿತ್ತು. ಒಂದನೆಯದು, ಪಂಚಕೇದಾರಗಳಲ್ಲಿ ಮೊದಲನೆಯದಾದ ಕೇದಾರನಾಥಕ್ಕೆ ಹೋಗಲು ಗೌರೀಕುಂಡದ ವರೆಗೆ ಬಸ್‌ನಲ್ಲಿ ಹೋಗಬೇಕು – ಅದಕ್ಕೆ ಟಿಕೆಟ್ ಬುಕ್ ಮಾಡಿಸಬೇಕು. ಎರಡನೆಯದು, ಗೌರೀಕುಂಡದಲ್ಲಿ ತಂಗಲು ಭಾರತ ಸೇವಾಶ್ರಮದ ಸ್ವಾಮೀಜಿಗೆ ಫೋನ್ ಮಾಡಿ ಕೋಣೆ ಬುಕ್ ಮಾಡಿಸಬೇಕು. ಮೂರನೆಯದು, ಒಣ ದ್ರಾಕ್ಷಿ, ಗೋಡಂಬಿಯೇ ಮೊದಲಾದ ಪ್ರಯಾಣಕ್ಕೆ ಅಗತ್ಯವಾದ ಕೆಲವು ವಸ್ತುಗಳನ್ನು ಖರೀದಿಸಬೇಕು. ಕನಖಲ್ ಸೇವಾಶ್ರಮದ ಸಂಜಯ್ ಮಹಾರಾಜರು (ಸ್ವಾಮಿ ದೇವತಾನಂದರು) ಮಧ್ಯಾಹ್ನ ಹೊತ್ತಿಗೆ ಟಿಕೆಟ್ ತರಿಸಿಕೊಟ್ಟರು. ಗೌರೀಕುಂಡದ ಸ್ವಾಮಿಗಳಿಗೆ ನಮ್ಮ ಪರಿಚಯ ಪತ್ರವನ್ನೂ ಒದಗಿಸಿಕೊಟ್ಟರು. ಸಾಯಂಕಾಲ ನಾನು, ಕರುಣಾಕರಾನಂದಜಿ ಮಾರ್ಕೆಟ್ಟಿಗೆ ಹೋಗಿ ಅಗತ್ಯವಿದ್ದ ವಸ್ತುಗಳನ್ನು ಖರೀದಿಸಿಕೊಂಡು ಬಂದೆವು.

ರಾತ್ರಿಹೊತ್ತು ಮರುದಿನ ಒಯ್ಯಬೇಕಾಗಿದ್ದ ವಸ್ತುಗಳನ್ನು ಮಾತ್ರ ಪ್ರತ್ಯೇಕಿಸಿ, ಬೆನ್ನ ಹಿಂದೆ ಹಾಕಿಕೊಳ್ಳುವ 'ಏರ್‌ಬ್ಯಾಗ್'ಗೆ ತುಂಬಿದೆವು. ಅದರೊಂದಿಗೆ ಹೆಗಲಲ್ಲಿ ತೂಗಾಡುವ ಚೀಲವನ್ನೂ ಒಯ್ದೆವು. ದೊಡ್ಡ ಬ್ಯಾಗನ್ನು ಹರಿದ್ವಾರದಲ್ಲೇ ಇಟ್ಟೆವು – ಅಗತ್ಯವೆನಿಸುವ ವಸ್ತುಗಳನ್ನೆಲ್ಲ ಅದರಲ್ಲೇ ಇಟ್ಟು , ಸ್ವಾಮೀಜಿಗಳೊಬ್ಬರ ಕೈಗೆ ಅದನ್ನೊಪ್ಪಿಸಿದೆವು. ಮರುದಿನ ಬೆಳಗ್ಗೆ ಐದೂವರೆ ಘಂಟೆಗೆ ಬಸ್ ಹೊರಡುತ್ತದೆ. ನಮಗಿಬ್ಬರಿಗೂ ಬಸ್‌ತಂಗುದಾಣ ಎಲ್ಲಿದೆ ಗೊತ್ತಿರಲಿಲ್ಲ. ಹಾಗಾಗಿ ಆಶ್ರಮದ ಒಬ್ಬ ಸ್ವಯಂಸೇವಕನನ್ನು ಕಳುಹಿಸುವ ವ್ಯವಸ್ಥೆ ಮಾಡಿದ್ದರು ಸಂಜಯ್ ಮಹಾರಾಜರು. ಬೆಳಗ್ಗೆ ೪.೪೫ ಆದರೂ ಆತನ ಪತ್ತೆಯಿಲ್ಲ. ಸಣ್ಣಗೆ ಮಳೆ, ಜೋರಾಗಿ ಗಾಳಿ ಬೀಸ

ತೊಡಗಿತ್ತು. ಫೋನ್ ಮಾಡಿ ನೋಡಿದರೆ ಆತ ಗಡದ್ದಾಗಿ ನಿದ್ದೆ ಮಾಡಿಬಿಟ್ಟಿದ್ದ. ಇರಲಿ, ಪರವಾಗಿಲ್ಲ ಎಂದು ಸಂಜಯ ಮಹಾರಾಜರೇ ನಮ್ಮ ಜೊತೆಗೆ ಬಸ್‌ಸ್ಟ್ಯಾಂಡ್ ಬಳಿಗೆ ಬಂದರು. ಬಸ್ ಆಗಲೇ ಬಂದು ನಿಂತಿತ್ತು. ಬಸ್ ನಿಂತಲ್ಲೇ ಒಬ್ಬಾತ 'ರೈನ್‌ಕೋಟ್, ರೈನ್ ಕೋಟ್, ದಸ್ ರೂಪಯಾ' ಎಂದು ಮಾರುತ್ತಿದ್ದ. ಉತ್ತರಾಖಂಡ ಯಾತ್ರೆ ಮಾಡುವವರೆಲ್ಲಾ ಈಗ ೧೦ ರೂ.ಗೆ ಸಿಗುವ ಈ ತೆಳುವಾದ ಪಾಲಿಥೀನ್ ರೈನ್‌ಕೋಟ್ ಒಯ್ಯುತ್ತಾರೆ. ಅನುಕೂಲವೇನೆಂದರೆ, ಭಾರವಿಲ್ಲ ; ತುಂಬ ಅಗ್ಗ ಕೂಡ. ಆಗಲೋ ಈಗಲೋ ಬಂದು ಸ್ವಲ್ಪ ಹೊತ್ತಿನಲ್ಲೇ ಮಾಯವಾಗುವ ಹಿಮಾಲಯದ ಮಳೆಯನ್ನು ತಡೆದುಕೊಳ್ಳಲು ಅದು ಸಾಕು. ನಾವು ಒಂದೊಂದು ರೈನ್‌ಕೋಟ್ ಕೊಂಡುಕೊಂಡೆವು. ಬಸ್ ಹತ್ತಿ ಕುಳಿತೆವು; ಗಂಟೆ ೫.೧೫ ಆದರೂ ಡ್ರೈವರ್ ಬಸ್ ಬಿಡುತ್ತಿಲ್ಲ. ಬಹುಪಾಲು ಟಿಕೆಟ್‌ಗಳು ಬುಕ್ ಆಗಿದ್ದವು ಅಂತ ಕಾಣುತ್ತದೆ, ಆದರೆ ಕೆಲವರು ಇನ್ನೂ ಬಂದಿರಲಿಲ್ಲ. ಅಲ್ಲೇ ಹತ್ತಿಪ್ಪತ್ತು ಜನರ ಒಂದು ದೊಡ್ಡ ಪಾರ್ಟಿ ಗೌರೀಕುಂಡಕ್ಕೆ ಹೊರಟಿತ್ತು. ಅವರಲ್ಲಿ ಕೆಲವರನ್ನು ಡ್ರೈವರ್ ಬಳಿಯ ಕ್ಯಾಬಿನ್‌ನಲ್ಲಿ ಕುಳಿತುಕೊಳ್ಳಲು ಹೇಳಿದ್ದಕ್ಕೆ ಆ ಯಾತ್ರಿಕರಿಗೂ ಕಂಡಕ್ಟರನಿಗೂ (ಅವನೇ ಓನರ್ ಇರಬೇಕೇನೋ) ಜಟಾಪಟಿ ನಡೆಯಿತು. ಬಸ್ ಓನರ್, ಕಂಡಕ್ಟರ್‌ಗಳು ಅಲ್ಲಿ ಯಾತ್ರಿಕರನ್ನು ತುಂಬಾ ಕೆಟ್ಟದಾಗಿ ನಡೆಸಿಕೊಳ್ಳುತ್ತಾರೆ. ನಾವು ನಮ್ಮಲ್ಲೇ, 'ಇವನು ಕರ್ನಾಟಕಕ್ಕೆ ಬರಲಿ, ಜನ ಒಂದು ಕೈ ನೋಡಿಕೊಳ್ಳುತ್ತಾರೆ – ಈ ಥರ ದರ್ಬಾರ್ ಮಾಡಿದರೆ' ಎಂದು ಮಾತಾಡಿಕೊಂಡೆವು. ಇರಲಿ, ಅದು ಉತ್ತರಾಖಂಡ. ಹೊಸ ರಾಜ್ಯವಾದ ಮೇಲೆ ಅನೇಕ ಬದಲಾವಣೆಗಳಾಗಿವೆ. ಅಂತೂ ೫.೩೦ರ ಹೊತ್ತಿಗೆ ಬಸ್ ಹೊರಟಿತು.

**೭. ಪಂಚಕೇದಾರ – ಪಾಂಡವರ ಕಥೆ :** ಪಂಚಕೇದಾರಕ್ಕೆ ಸಂಬಂಧಪಟ್ಟಂತೆ ಗಢವಾಲ್ ಪ್ರದೇಶದಲ್ಲಿ ಪ್ರಚಲಿತವಿರುವ ಕಥೆ ಹೀಗಿದೆ:

ಕುರುಕ್ಷೇತ್ರ ಯುದ್ಧವೆಲ್ಲ ಮುಗಿದ ನಂತರ ಪಂಚಪಾಂಡವರು ತಾವು ಮಾಡಿದ ಗೋತ್ರಹತ್ಯೆ, ಬಂಧುಹತ್ಯೆಯ ಪಾಪವನ್ನು ಕಳೆದುಕೊಳ್ಳಲು ಕಾಶಿಗೆ ಹೋದರಂತೆ. ಅಲ್ಲಿ ಕಾಶಿ ವಿಶ್ವನಾಥನ ದರ್ಶನ ಮಾಡಿ ತಮ್ಮ ಘೋರ ಪಾಪಗಳನ್ನೆಲ್ಲ ಕಳೆದುಕೊಂಡಲ್ಲದೆ ಸ್ವರ್ಗಕ್ಕೆ ಹೋಗಲು ಸಾಧ್ಯವೇ ಇಲ್ಲವೆಂದು ಅವರಿಗೆ ಮನವರಿಕೆಯಾಗಿತ್ತು. ಆದರೆ ಅವರು ಕಾಶಿಗೆ ಹೊಗುತ್ತಲೇ ಶಿವ ಭಯಭೀತನಾದ. 'ಪಾಂಡವರು ಇಷ್ಟೊಂದು ಘನಘೋರವಾದ ಪಾಪವನ್ನು ಹೊತ್ತು ಬರುತ್ತಿದ್ದಾರೆ, ಅವರೆಲ್ಲಿಯಾದರೂ ನನ್ನ ದರ್ಶನ ಮಾಡಿ ಬಿಟ್ಟರೆ ನನ್ನ ಗತಿಯೇನು?' ಅವನು ಅಲ್ಲಿಂದ ಓಡಿಹೋದ. ಕಾಶಿಗೆ ಹೋದರೂ ಶಿವನನ್ನು ಕಾಣದೆ ಚಿಂತಿತರಾದ ಪಾಂಡವರು, ಅವನನ್ನು ಕಾಣದೆ ಬೇರೆ ದಾರಿಯೇ ಇಲ್ಲವೆಂದು ಆತನನ್ನು ಹುಡುಕುತ್ತಾ ಹಿಮಾಲಯದ ಕಡೆಗೆ ಬಂದರು. ಕೇದಾರನಾಥಕ್ಕೆ ಹೋಗುವ ಮಾರ್ಗದಲ್ಲಿ ಗುಪ್ತಕಾಶಿ ಎಂಬ ಸ್ಥಳವಿದೆ. (ಇಲ್ಲೇ ಶಿವ ಪಾರ್ವತಿಯರ ಮದುವೆ ನಿಶ್ಚಯವಾದದ್ದು ಎಂದು ಸ್ಥಳಪುರಾಣ ಹೇಳುತ್ತದೆ.) ಅಲ್ಲಿ ಶಿವನು ಎತ್ತಿನ ರೂಪ ತಾಳಿ ಮೇಯುತ್ತಿದ್ದ. (ಶಿವನು ಗುಪ್ತರೂಪ ತಾಳಿದ್ದರಿಂದ ಅನಂತರ, 'ಗುಪ್ತಕಾಶಿ' ಎಂದೇ ಹೆಸರಾಯಿತು) ಶಿವನನ್ನು ಹುಡುಕುತ್ತಾ ಬಂದ ಪಾಂಡವರಿಗೆ ಇದು ಗೊತ್ತಾಯಿತು. ಇನ್ನು ಶಿವನನ್ನು ಬಿಡಬಾರದು ಎಂದು ಭೀಮ ಆ ಎತ್ತಿನ ಬಾಲವನ್ನೇ ಬಿಗಿಯಾಗಿ ಹಿಡಿದುಕೊಂಡುಬಿಟ್ಟ. ಇಲ್ಲಿಯೂ ತಪ್ಪಿಸಿಕೊಳ್ಳಲಾಗದಲ್ಲ ಎಂದು ಶಿವನು ಶಿಲಾರೂಪ ತಾಳಿ, ಐದು ಭಾಗಗಳಾಗಿ ಒಡೆದು ಬೇರೆ ಬೇರೆ ಸ್ಥಳಗಳಲ್ಲಿ ಬಿದ್ದುಬಿಟ್ಟನಂತೆ. ಎತ್ತಿನ ಡುಬ್ಬ ಕೇದಾರನಾಥದಲ್ಲಿ ಬಿತ್ತಂತೆ. ಕೇದಾರನಾಥದಲ್ಲಿ ಶಿವನ ಉದ್ಭವಲಿಂಗ ಅಲಂಕಾರವಿಲ್ಲದಾಗ ಎತ್ತಿನ ಡುಬ್ಬದಂತೆಯೇ ಕಾಣಿಸುತ್ತದೆ. (ಬಹುಶಃ ಅದನ್ನು ನೋಡಿಯೇ ಈ ರೀತಿಯ ಕಥೆಯನ್ನು ಕಲ್ಪಿಸಿರಬಹುದೇನೋ!) ಅದೇರೀತಿ ಶಿವನ ಹೊಟ್ಟೆ , ಮಧ್ಯಭಾಗ ಮದ್ದಮಹೇಶ್ವರದಲ್ಲೂ , ಭುಜಗಳು ತುಂಗನಾಥದಲ್ಲೂ , ಮುಖ ರುದ್ರನಾಥದಲ್ಲೂ , ಅವನ ಜಟಾಜೂಟ ಕಲ್ಪೇಶ್ವರದಲ್ಲೂ ಬಿದ್ದವಂತೆ. ಈ ಐದು ಪ್ರದೇಶಗಳು ಶಿವನ ಪವಿತ್ರ ಕ್ಷೇತ್ರಗಳಾದವು. ಈ ಕ್ಷೇತ್ರಗಳ ಸಂದರ್ಶನ ಮಾಡಿ ಶಿವನ ಪೂರ್ಣ ದರ್ಶನವನ್ನು ಪಡೆದ ಪಾಂಡವರು, ಪಾಪಮುಕ್ತರಾಗಿ ಸ್ವರ್ಗಾರೋಹಣ ಮಾಡಿದರಂತೆ. ಈ ಮಂದಿರಗಳನ್ನು ಪಂಚ ಪಾಂಡವರೇ ಕಟ್ಟಿದರು ಎಂಬ ಪ್ರತೀತಿಯಿದೆ. ದಂತಕತೆಯೇನಿದ್ದರೂ, ಇವು ತುಂಬ ಪ್ರಾಚೀನಕಾಲದಲ್ಲೇ ಕಟ್ಟಿದ ಶಿಲಾ ಮಂದಿರಗಳಾಗಿವೆ.

**೮. ಗೌರೀಕುಂಡ :** ಗೌರೀಕುಂಡ ತಲುಪಿದ ನಾವು ಮೊದಲು ಉಳಕೊಳ್ಳುವ ವ್ಯವಸ್ಥೆಯಾಗಲಿ ಎಂದು 'ಭಾರತ ಸೇವಾಶ್ರಮ ಸಂಘ'ದ ಶಾಖೆಗೆ ಹೋದೆವು. ಸಾಧುಗಳೇ ನಡೆಸುವ ಈ ಸಂಸ್ಥೆ ಯಾತ್ರಿಕರಿಗೆ ಕಡಿಮೆ ದರ್ಜೆಗೆ ವಸತಿ, ಊಟದ ಸೌಕರ್ಯ ಒದಗಿಸುತ್ತದೆ. ಬಹುಪಾಲು ಬಂಗಾಳಿಗಳೇ ಇಲ್ಲಿನ ಸಾಧುಗಳು; ಇಲ್ಲಿಗೆ ಬರುವ ಭಕ್ತರಲ್ಲೂ ಬಂಗಾಳಿಗಳೇ ಹೆಚ್ಚಿನವರು. ರಾಮಕೃಷ್ಣ ಮಿಷನ್‌ಗೂ ಭಾರತ ಸೇವಾಶ್ರಮಕ್ಕೂ ಹಳೆಯ ನಂಟು. ಹೀಗಾಗಿ ಇಲ್ಲಿಂದ ಹೋದ ಸಾಧುಗಳಿಗೋಸ್ಕರ ಅವರು ಯಾವಾಗಲೂ ವಸತಿ ಒದಗಿಸುತ್ತಾರೆ. ಆದರೆ ಯಾತ್ರಿಕರ ಸಂಖ್ಯೆ ಹೆಚ್ಚಿದ್ದರೆ ನಮಗೆ ಕೋಣೆ ಒದಗಿಸುವುದು ಅವರಿಗೂ ಕಷ್ಟವೇ ಎಂದು ತಿಳಿದಿತ್ತು; ಹೀಗಾಗಿ ಹರಿದ್ವಾರದಿಂದ ಮೊದಲೇ ಫೋನ್ ಮಾಡಿ, ಕೋಣೆ ಮೀಸಲಿಡಲು ಹೇಳಿದ್ದೆವು. ಅಂದು ನಾವು ಭಾರತ ಸೇವಾಶ್ರಮದಲ್ಲೇ ತಂಗಿದೆವು.

ಮರುದಿನ ಬೆಳಗ್ಗೆ ನಾಲ್ಕು ಗಂಟೆಗೇ ಹೊರಡುವುದು ಉತ್ತಮ ಎಂದು ನಾನು, ಕರುಣಾಕರಾನಂದರು ಮಾತನಾಡಿಕೊಂಡೆವು. ತಡವಾಗಿ ಹೊರಟಷ್ಟೂ ತೊಂದರೆಗಳು ಹೆಚ್ಚು. ಗೌರೀಕುಂಡದಿಂದ ಮುಂದಕ್ಕೆ ಕೇದಾರನಾಥದವರೆಗೆ ಹದಿನಾಲ್ಕು ಕಿ.ಮೀ. ಯಾತ್ರೆ ನಡಿಗೆಯ ಮೂಲಕ. ಆದರೆ ಸುಮಾರು ೬ ಗಂಟೆಯ ಹೊತ್ತಿಗಾಗಲೇ ಯಾತ್ರಿಕರ ಸಂಖ್ಯೆ ಹೆಚ್ಚಾಗುವುದು; ಅದರೊಂದಿಗೆ, ನಡೆಯಲು ಕಷ್ಟವಾಗುವುದೆಂದು ಯಾತ್ರಿಕರನ್ನು ಹೊತ್ತೊಯ್ಯುವ ಕುದುರೆ (ಕಚ್ಚರ್ ಎಂದು ಕರೆಯುತ್ತಾರೆ – ಒಂದು ರೀತಿಯಲ್ಲಿ ಹೇಸರಗತ್ತೆ ಎನ್ನಬಹುದು), ದಂಡಿ, ಕಂಡಿ (ಪಹಾಡಿ ಜನ ವೃದ್ಧರನ್ನೂ ಹಾಗೂ ಮಕ್ಕಳನ್ನೂ ಒಂದು ದೊಡ್ಡ ಬುಟ್ಟಿಯಲ್ಲಿ ಕುಳ್ಳಿರಿಸಿ ತಮ್ಮ ಬೆನ್ನ ಹಿಂದೆ ಹೊತ್ತೊಯ್ಯುತ್ತಾರೆ. ಈ ಬುಟ್ಟಿಯೇ ಕಂಡಿ) ಇವೆಲ್ಲ ರಸ್ತೆಯ ಬಹುಭಾಗವನ್ನು ಆಕ್ರಮಿಸಿ, ಕಾಲುನಡಿಗೆಯ ಯಾತ್ರಿಕರಿಗೆ ತುಂಬಾ ತೊಂದರೆಯಾಗುತ್ತದೆ. ಆದ್ದರಿಂದ ಗೌರೀಕುಂಡದ ತಪ್ತಕುಂಡದಲ್ಲಿ (ಬಿಸಿನೀರು ಇಲ್ಲಿ ನೈಸರ್ಗಿಕವಾಗಿ ಒಂದು ಚಿಲುಮೆಯ ಮೂಲಕ ಬರುತ್ತಿರುತ್ತದೆ. ಗೌರೀಕುಂಡದಲ್ಲಿ ಇದನ್ನು ತಪ್ತಕುಂಡ ಎನ್ನುತ್ತಾರೆ)



ಗೌರೀಕುಂಡ

ಸ್ನಾನಮಾಡಲಾಗದು, ಆದ ಕಾರಣ ಈ ದಿನ ಸಾಯಂಕಾಲವೇ ತಪ್ತಕುಂಡದಲ್ಲಿ ಸ್ನಾನ ಮುಗಿಸೋಣ ಎಂದು ನಾವಿಬ್ಬರೂ ಹೊರಟೆವು. ತಪ್ತಕುಂಡದ ಒಂದು ತುದಿಯಲ್ಲಿ ಬಿಸಿನೀರು ಬರುತ್ತಿರುತ್ತದೆ. ಬಂಡೆಯ ಮಧ್ಯದಿಂದ ಬರುವ ಬಿಸಿನೀರು ಮೂಲತಃ ಬಿಸಿಯಾಗಿ ರುತ್ತದೆ. ಅದಕ್ಕೆ ಪೈಪ್ ಕಟ್ಟಿ , ನೀರು ಕುಂಡಕ್ಕೆ ಬೀಳುವಂತೆ ಮಾಡಿ ದ್ದಾರೆ. ಆ ನೀರನ್ನು ಒಂದು ತೊಟ್ಟಿಗೆ ತುಂಬಿ, ಅದರೊಂದಿಗೆ ತಣ್ಣೀರನ್ನು ಮಿಶ್ರಮಾಡಿ ಬಿಟ್ಟಿರುತ್ತಾರೆ. ಹೀಗೆ ಹದಗೊಂಡ ನೀರಿನಲ್ಲಿ ಸ್ನಾನಮಾಡುವುದು ಹಿತಕರವಾಗಿರುತ್ತದೆ. ಎಲ್ಲರೂ ತೊಟ್ಟಿಗಿಳಿದು ಸ್ನಾನ ಮಾಡುತ್ತ ಆ ನೀರಿನ ಬಣ್ಣವೇ ಬದಲಾಗಿ ಬಿಡುತ್ತದೆ. ನಾವು ಸ್ನಾನಕ್ಕೆ ಹೋದಾಗ ತೊಟ್ಟಿಯನ್ನು ಶುಚಿಗೊಳಿಸಲು ಅದರ ನೀರ ನ್ನೆಲ್ಲಾ ಖಾಲಿ ಮಾಡಿದ್ದರು. ಬಂಡೆಯಿಂದ ಇಳಿದುಬರುವ ಚಿಲು ಮೆಗೆ ಹಾಕಿದ್ದ ಪೈಪಿನ ಅಡಿಯಲ್ಲಿ ಬಾಗಿ ಕುಳಿತು ನಾವು ಸ್ನಾನ ಮಾಡಿದೆವು. ತಣ್ಣೀರು ಮಿಶ್ರಣವಾಗದ ನೀರು ಸಾಕಷ್ಟು ಬಿಸಿ ಯಾಗಿತ್ತು. ಸ್ನಾನ ಮುಗಿಸಿದಾಗ ನಮ್ಮ ದೇಹದಿಂದ ಹೊಗೆಯೇಳು ತ್ತಿತ್ತು. ಆದರೆ ಮೈ ಒರೆಸಿಕೊಂಡಾಗ ತುಂಬ ಚಳಿಯಾಗತೊಡಗಿತು. ಅಂತೂ ತಪ್ತಕುಂಡದ ಸ್ನಾನವಾಯಿತು. ಸಾಯಂಕಾಲ ಗೌರಿಯ ಆರತಿ ನೊಡೋಣವೆಂದು ಗೌರೀಕುಂಡದ ಗೌರೀಮಾತೆಯ ದೇವಾ ಲಯಕ್ಕೆ ಹೋದೆವು. ಸುಮಾರು ಅರ್ಧಗಂಟೆ ಗೌರೀಮಾತೆಯ ಆರತಿ ನಡೆಯಿತು. 'ನಮ್ಮ ಯಾತ್ರೆಯನ್ನು ಸುಸೂತ್ರವಾಗಿ ನಡೆಸಿ ಕೊಡು' ಎಂದು ಮಾತೆಯನ್ನು ಪ್ರಾರ್ಥಿಸಿ, ಪಕ್ಕದಲ್ಲಿದ್ದ ಭೈರವನ ಮಂದಿರಕ್ಕೂ ಹೋಗಿ ಪ್ರಾರ್ಥನೆ ಮಾಡಿ ಬಂದೆವು. ಮರುದಿನ ಬೆಳಗ್ಗೆ ಕೇದಾರಯಾತ್ರೆಗೆ ಬೇಕಾದ ಸಿದ್ಧತೆ ಮುಗಿಸಿ, ರಾತ್ರಿ ಊಟ ಮಾಡಲು ಭಾರತ ಸೇವಾಶ್ರಮ ಕ್ಯಾಂಟೀನ್‌ಗೆ ಹೋದೆವು. ಊಟ ಮುಗಿಸಿ ಬಂದಾಗ ತುಂಬ ಆಯಾಸಗೊಂಡಿದ್ದೆವು. ಮರುದಿನ ನಡೆಯಬೇಕಲ್ಲ ಎಂದು ಆದಷ್ಟು ಬೇಗನೆ ಮಲಗಿ ನಿದ್ರಿಸಿದೆವು.

**೪. ಕೇದಾರನಾಥದತ್ತ :** ಗೌರೀಕುಂಡದಿಂದ ಕೇದಾರನಾಥಕ್ಕೆ ೧೪ ಕಿ. ಮೀ. ಕಾಲ್ನಡಿಗೆಯ ಹಾದಿ. ಹೆಚ್ಚು ಜನಜಂಗುಳಿ, ಕುದುರೆ ಇತ್ಯಾದಿ ಗಳ ಅಡಚಣೆಯಿಲ್ಲದಿದ್ದರೆ ಸುಮಾರು ಐದು-ಐದೂವರೆ ಗಂಟೆ ನಡೆಯಬೇಕಾದೀತು. ಅಷ್ಟೇನು ಕಡಿದಾದ ದಾರಿಯಲ್ಲ ; ರಸ್ತೆ ತಕ್ಕ ಮಟ್ಟಿಗೆ ಅಗಲವಾಗಿದೆ, ಕಲ್ಲು-ಬಂಡೆಗಳನ್ನು ಹಾಕಿ ದಾರಿ ಸುಸ್ಥಿತಿ ಯಲ್ಲಿರುವಂತೆ ಮಾಡಿದ್ದಾರೆ. ಆದರೆ ಇನ್ನೂ ಮೋಟಾರ್ ಗಾಡಿಗಳು ಓಡಾಡಲಾರವು. ಸೈಕಲ್ ಕೂಡ ಆ ರಸ್ತೆಯಲ್ಲಿ ಸಾಗಲಾರದು. ಇತ್ತೀ ಚಿಗೆ ಯಾತ್ರಿಕರ ಸಂಖ್ಯೆ ಮಿತಿಮೀರಿ ಹೆಚ್ಚಾದ್ದರಿಂದ ಕೇದಾರನಾಥದ ವರೆಗೂ ಮೋಟರ್ ರಸ್ತೆ ಮಾಡಬೇಕೆಂಬ ಬೇಡಿಕೆಯಿದೆ. ಸರ್ಕಾರ ಆ ಪ್ರಸ್ತಾಪವನ್ನು ಪರಿಶೀಲಿಸುತ್ತಿದೆ ಎಂದೆಲ್ಲ ಪತ್ರಿಕಾ ವರದಿಗಳನ್ನು ಓದಿದ್ದೆ. ಆದರೆ ಸಾವಿರಾರು ಮಂದಿ ಕುದುರೆ (ಅಂದರೆ ಹೇಸರಗತ್ತೆ) ಸಾಗಿಸುವವರು, ದಂಡಿ, ಕಂಡಿಗಳನ್ನು ಸಾಗಿಸುವವರು ಕೆಲಸ ಕಳೆದು ಕೊಳ್ಳುತ್ತಾರೆ ಎಂದು ಅವರ ಸಂಘಗಳು ಗದ್ದಲ ಮಾಡಿದ ವರದಿಯೂ ಬಂದಿತ್ತು. ಜೊತೆಗೆ ಕೇದಾರನಾಥದಂತಹ ಪವಿತ್ರ ಧಾಮಕ್ಕೆ ಮೈ ಬಗ್ಗಿಸಿ ನಡೆದುಕೊಂಡು ಹೋಗಿ ಯಾತ್ರೆ ಮಾಡಿದರೆ ಮಾತ್ರ ಸಾರ್ಥಕ್ಯ ಎಂಬ ಅಭಿಪ್ರಾಯವೂ ಇದೆ. ಒಟ್ಟಿನಲ್ಲಿ ಗೌರೀಕುಂಡದಿಂದ ಕೇದಾರನಾಥಕ್ಕೆ ಇನ್ನೂ ಮೋಟಾರ್ ರಸ್ತೆ ಆರಂಭವಾಗುವ ಸೂಚನೆ ಕಂಡುಬರುತ್ತಿಲ್ಲ. ಆದರೆ ಹಣವಿದ್ದವರಿಗೆ ಹೆಲಿಕಾಪ್ಟರ್ ಸೌಲಭ್ಯ ವಂತೂ ಆರಂಭವಾಗಿದೆ. ಗೌರೀಕುಂಡಕ್ಕೆ ಮುನ್ನ 'ಫಟಾ' ಎಂಬ ಸ್ಥಳದಿಂದ ಸುಮಾರು ಹದಿನೈದು-ಇಪ್ಪತ್ತು ನಿಮಿಷಕ್ಕೊಮ್ಮೆ ಹೆಲಿ ಕಾಪ್ಟರ್‌ಗಳು ಸತತವಾಗಿ ಹಾರಾಡುತ್ತಿದ್ದುದ್ದನ್ನು ಕಂಡೆವು. (ಆದರೆ ಹವಾಮಾನ ಚೆನ್ನಾಗಿರಬೇಕು ಅಷ್ಟೆ.) ಒಬ್ಬರಿಗೆ ಸುಮಾರು ೮,೦೦೦ ರೂ ಖರ್ಚಾಗುವುದೆಂದು ಕೇಳಿದ್ದೆವು. ಏನೇ ಇರಲಿ, ಗೌರೀಕುಂಡದಲ್ಲಿ ಬೆಳಿಗ್ಗೆ ನಾಲ್ಕು ಗಂಟೆಗೇ ಸಿದ್ಧರಾಗಿ ನಿಂತೆವು. ಸಾಮಾನ್ಯವಾಗಿ ನಡಿಗೆ ಆರಂಭಿಸುವಾಗ ಒಂದು ಬೆತ್ತ (ಲಾಠಿ ಎನ್ನುತ್ತಾರೆ – ಸುಮಾರು ಹತ್ತು ರೂ.ಗೆ ಸಿಗುತ್ತದೆ) ವನ್ನು ಒಯ್ಯುತ್ತಾರೆ. ಅದರ ಆಧಾರದಿಂದ ನಡಿಗೆಯ ಶ್ರಮ ತುಸು ಕಡಿಮೆಯಾಗುತ್ತದೆ. ಪರ್ವತ ಇಳಿಯುವಾಗ ಲಂತೂ ಅದು ತುಂಬ ಸಹಕಾರಿ – ಅನೇಕ ಸಲ ಜಾರಿ ಬೀಳುವುದನ್ನು ಅದು ತಪ್ಪಿಸುತ್ತದೆ. ನಾವು ಲಾಠಿ, ಏರ್‌ಬ್ಯಾಗ್ ಹಾಕಿಕೊಂಡು ಹೊರಟು ನಿಂತೆವು. ಕಾಲ್ನಡಿಗೆಯಲ್ಲಿ ಹೋಗುವಾಗ ಸಾಧಾರಣವಾಗಿ ಹೆಚ್ಚು ಭಾರದ ಬಾಗ್ ಇತ್ಯಾದಿಗಳನ್ನು ಒಯ್ಯುವುದಿಲ್ಲ. ಹೆಚ್ಚಿನ ವಸ್ತುಗಳನ್ನು ಗೌರೀಕುಂಡದಲ್ಲೇ ಬಿಟ್ಟು , ಅಗತ್ಯವಾದ ಒಂದೆರಡು ವಸ್ತುಗಳನ್ನು ಮಾತ್ರ ಒಂದು ಸಣ್ಣ ಲಕೋಟೆ ಅಥವಾ ಕೈಚೀಲದಲ್ಲಿ ಹಾಕಿಕೊಂಡು ಹೊರಡುವುದು ಪದ್ಧತಿ. ಆದರೆ ಈ ಸಲ ನಾವು ಕೇದಾರನಾಥದಲ್ಲಿ ಎರಡು ಮೂರು ದಿನ ತಂಗಬೇಕೆಂದಿದ್ದೆವು. ಕೇದಾರನಾಥನ ಸುತ್ತಮುತ್ತಲ ಸ್ಥಳಗಳನ್ನು ನೋಡಬೇಕೆಂದಿದ್ದುದ ರಿಂದ ಪ್ರಧಾನ ವಸ್ತು ಗಳನ್ನು ಒಯ್ಯಬೇಕೆಂದುಕೊಂಡು ನಮ್ಮ ಏರ್ ಬಾಗ್‌ನ್ನು ಒಯ್ದಿದ್ದೆವು – ಇದೇ ನಾವು ಮಾಡಿದ ಪ್ರಮಾದ. ಸ್ವಲ್ಪ ಮುಂದುವರಿಯುವುದರಲ್ಲೇ ನಾವು ವಿಪರೀತ ಸುಸ್ತಾಗಿ, ನಮ್ಮ ತಪ್ಪಿನ ಅರಿವಾಯಿತು. ಒಂದೊಂದು ಹೆಜ್ಜೆಯಿಡುವಾಗಲೂ ನಮ್ಮ ಬೆನ್ನ ಮೇಲಿನ ಭಾರ ನಮ್ಮನ್ನು ಕೆಳಕ್ಕೆ ಜಗ್ಗತೊಡಗಿ, ಕೇದಾರನಾಥದ ವರೆಗೂ ನಮ್ಮನ್ನು ನಾವು ಶಪಿಸಿಕೊಳ್ಳುವಂತಾಯಿತು.

ನಡುನಡುವೆ ವಿಶ್ರಾಂತಿ ಪಡೆಯದೆ ನಡೆಯುವುದು ನಮಗೆ ಸಾಧ್ಯವಿರಲಿಲ್ಲ. ಒಂದೆಡೆ ಚಹಾ ಕುಡಿದು ಬಿಸ್ಕತ್ತು, ಸಮೋಸ ಹೀಗೆ ಏನೋ ತಿಂದೆವು. ಅಲ್ಲಿ ಎಲ್ಲ ಕಡೆ ಚಹಾಗೆ ಒಂದೇ ಸಮನೆ ಸಕ್ಕರೆ ಹಾಕಿ ವಿಪರೀತ ಸಿಹಿ ಮಾಡಿಬಿಡುತ್ತಾರೆ. ನಮಗೆ ಅದು ಈಗಾಗಲೇ ಚೆನ್ನಾಗಿ ಅನುಭವಕ್ಕೆ ಬಂದದ್ದರಿಂದ ಚಹಾಗೆ ಆರ್ಡರ್ ಮಾಡುವಾಗಲೇ,

‘ಚಿನಿ ಬಹುತ್ ಕಮ್ ದೇನಾ’ (ಸಕ್ಕರೆ ತುಂಬಾ ಕಡಮೆ ಹಾಕಿ ಚಹಾ ಮಾಡು) ಎಂದು ಹೇಳುತ್ತಿದ್ದೆವು. ಹಾಗೆ ಹೇಳಿದ್ದರಿಂದ ಮಾತ್ರ ಚಹಾ ಕುಡಿಯುವುದು ನಮಗೆ ಸಹ್ಯವೆನಿಸುತ್ತಿತ್ತು. ಇನ್ನೇನು ಕೇದಾರನಾಥ ಬಂತು, ಇದೋ – ಇದೇ ಕೊನೆಯ ಬೆಟ್ಟ , ಅದನ್ನೂ ಏರಿಬಿಟ್ಟರೆ ಮುಗಿಯಿತು ಎಂದು ಹೇಳಿಕೊಳ್ಳುತ್ತಲೇ ಬಹಳ ದೂರ ಕ್ರಮಿಸಿಬಿಟ್ಟಿದ್ದೆವು. ಆದರೆ ಮೈಲಿಗಲ್ಲುಗಳು (ನಿಜವಾಗಿ ಕಿಲೋಮೀಟರ್ ಕಲ್ಲು ಎನ್ನಬೇಕು – ಆದರೆ ಈ ಪದ ರೂಢಿಯಲ್ಲಿ ಇಲ್ಲವಲ್ಲ!) ನಿಧಾನವಾಗಿಯೇ ಕಿಲೋಮೀಟರ್‌ಗಳನ್ನು ಸೂಚಿಸುತ್ತಾ ಎದುರಾಗುತ್ತಿದ್ದವು. ದಟ್ಟವಾದ ಅರಣ್ಯ, ಲಾವಣ್ಯದಿಂದ ಇಳಿದು ಬರುತ್ತಿರುವ ಮಂದಾಕಿನೀ ನದಿ, ದೂರದಲ್ಲಿ ಹಿಮಾಚ್ಛಾದಿತ ಕೇದಾರನಾಥ ಬೆಟ್ಟದ ಸಾಲುಗಳು, ಅದರ ಕೆಳಗಡೆ ಮರಗಳಿಲ್ಲದೆ ಹುಲ್ಲುಗಾವಲಿನಂಥ ಖಾಲಿ ಬೆಟ್ಟಪ್ರದೇಶ (ಅಲ್ಲಿ ಇದಕ್ಕೆ ಬುಗ್ಯಾಲ್ ಎನ್ನುತ್ತಾರೆ), ನಡುನಡುವೆ ಹಸಿರು ಹುಲ್ಲುಗಾವಲಿನ ಹಿನ್ನೆಲೆಯಲ್ಲಿ ಸುಂದರವಾಗಿ ಕಾಣಿಸುವ ಆಡು, ಕುರಿಗಳ ಮಂದೆಯನ್ನು ಸಾಗಿಸುತ್ತಿರುವ ಹಳ್ಳಿಯ ಜನಗಳು – ಇವನ್ನೆಲ್ಲ ನೋಡುತ್ತ ಬೆಟ್ಟವನ್ನೇರುವುದೇ ಒಂದು ಸೊಗಸು. ಆದರೆ ನಮ್ಮ ನಡಿಗೆ ನಿಧಾನ ಗತಿಯಲ್ಲಿ ಸಾಗಿದ್ದರಿಂದ ನಾವು ಬೆಟ್ಟವೇರುತ್ತ ಬಂದಂತೆ ಕುದುರೆ, ದಂಡಿ, ಕಂಡಿ ಎಲ್ಲವೂ ಆರಂಭವಾಗಿ, ನಮ್ಮ ರಸ್ತೆಯಲ್ಲಿ ಸಾಕಷ್ಟು ಗದ್ದಲವಾಗಿಬಿಟ್ಟಿತು. ಕೊನೆಗೂ ನಾವು ಕೇದಾರನಾಥ ತಲಪುವಾಗ ಸುಮಾರು ೧೧.೦೦ ಗಂಟೆ – ಸುಮಾರು ಎರಡು ಗಂಟೆ ತಡವಾಗಿ ತಲುಪಿದೆವು. ಮಣಭಾರದ ಬ್ಯಾಗನ್ನು ಹೊತ್ತೊಯ್ಯುತ್ತಾ ಭಾರತ ಸೇವಾಶ್ರಮ ತಲುಪಿದಾಗ ಅಲ್ಲಿನ ಉಸ್ತುವಾರಿ ನೋಡಿಕೊಳ್ಳುತ್ತಿದ್ದ ಬ್ರಹ್ಮಚಾರಿಗಳು ನಮ್ಮನ್ನು ನೋಡಿ, ‘‘ಬನ್ನಿ ಮಹಾರಾಜರೇ, ನೀವು ಸೀದಾ ಮೂರನೇ ನಂಬರ್ ಕೊಠಡಿಗೆ ಹೋಗಿ’’ ಎಂದು ಹೇಳಿದರು. ಅಲ್ಲೂ ನಾವು ಮೊದಲೇ ತಿಳಿಸಿದ್ದಂತೆ, ಭಾರತ ಸೇವಾಶ್ರಮದಲ್ಲೇ ತಂಗಿದೆವು. ನಮ್ಮೊಂದಿಗೆ ರಾಮಕೃಷ್ಣ ಮಿಷನ್ನಿನ ಇನ್ನಿಬ್ಬರು ಸ್ವಾಮಿಗಳೂ ಅಲ್ಲೇ ತಂಗಿದರು. ನಾಲ್ಕು ಹಾಸಿಗೆಗಳಿದ್ದ ಕೋಣೆಯನ್ನೇ ಭಾರತ ಸೇವಾಶ್ರಮದವರು ನಮಗಾಗಿ ಕೊಟ್ಟಿದ್ದರು. ನಾವು ಕೋಣೆಯೊಳಗೆ ಹೊಕ್ಕು, ‘ಉಸ್ಸಪ್ಪಾ’ ಎಂದು ಕುಸಿದು



**ಗೌರೀಕುಂಡದಿಂದ ಕೇದಾರನಾಥದತ್ತ ..**

ಕುಳಿತೆವು. ಬಚ್ಚಲ ಮನೆಯಲ್ಲಿ ಕೈ ಕಾಲು ತೊಳೆಯಲು ಹೋದರೆ ಮೈ ಕೊರೆಯುವಂತ ಶೀತಜಲವನ್ನು ಸ್ಪರ್ಶಿಸಿ, ‘ಹೇಗಪ್ಪಾ ಕೈಕಾಲು ತೊಳೆಯಲಿ!’ ಎಂದು ಹಿಂಜರಿಯಬೇಕಾಯಿತು. ಕೇದಾರನಾಥದಲ್ಲಿ ಇಂಥ ಬೇಸಿಗೆಯಲ್ಲೂ ಅತ್ಯಂತ ಚಳಿ. ದೇಗುಲದ ಹಿಂದೆಯೇ ಹಿಮಾಚ್ಛಾದಿತ ಬೆಟ್ಟಗಳಿವೆ. ೧೧೭೫೦ ಅಡಿಗಳಷ್ಟು ಎತ್ತರವಿರುವ ಕೇದಾರನಾಥದಲ್ಲಿ ಹಗಲು, ರಾತ್ರಿ ಮಲಗಿಕೊಳ್ಳುವಾಗ ದಪ್ಪನೆಯ ಕಂಬಳಿ, ರಜಾಯಿಗಳನ್ನು ಹೊದ್ದುಕೊಳ್ಳಲೇಬೇಕು. ಮಳೆ ಬಂದರಂತೂ ಮುಗಿಯಿತು, ಚಳಿಯಿಂದ ಮೈ ಕೈ ನಡುಗಲಾರಂಭಿಸುತ್ತದೆ. ಆದರೆ ಇಂದು ಹವಾಮಾನ ಪ್ರಶಾಂತವಾಗಿತ್ತು. ಮಳೆಯಿರಲಿಲ್ಲ. ಮೋಡಗಳೂ ವಿರಳವಾಗಿದ್ದವು. ಅತ್ಯಂತ ಆಯಾಸಗೊಂಡ ನಮಗೆ ವಿಶ್ರಾಂತಿ ಅಗತ್ಯವಾಗಿತ್ತು. ಮಲಗಿಕೊಂಡವರೇ ಹಾಸಿಗೆ, ರಜಾಯಿ ನಡುವೆ ನುಸುಳಿಕೊಂಡು ಬೆಚ್ಚನೆ ಮಲಗಿ ನಿದ್ರಿಸತೊಡಗಿದೆವು.

**೫. ಕೇದಾರನಾಥನ ದರ್ಶನ, ಪೂಜೆ :** ಕೇದಾರನಾಥನ ದರ್ಶನ ಇನ್ನೂ ಮಾಡಿರಲಿಲ್ಲ. ಸಾಯಂಕಾಲ ಐದೂವರೆ ಗಂಟೆಗೆ ಹೊರ ಬಂದು ನೋಡಿದರೆ ಸಣ್ಣಗೆ ಮಳೆ ಸುರಿಯುತ್ತಿತ್ತು. ಕೇದಾರನಾಥದಲ್ಲಿ ಕ್ಷಣಕ್ಷಣಕ್ಕೂ ಹವಾಮಾನ ಬದಲಾಗುತ್ತಿರುತ್ತದೆ. ಇದ್ದಕ್ಕಿದ್ದಂತೆ ಮೋಡ ಕವಿಯುತ್ತದೆ, ಮಳೆ ಬರುತ್ತದೆ. ಸ್ವಲ್ಪ ಹೊತ್ತಿನಲ್ಲಿ ಎಲ್ಲವೂ ತಿಳಿಯಾಗಿ ಪ್ರಖರವಾದ ಬಿಸಿಲು ಹರಡಿ ಬಿಡುತ್ತದೆ. ಕೆಲವೊಮ್ಮೆ ದಿನವಿಡೀ ಜಿಟಿಜಿಟಿ ಮಳೆ ಸುರಿಯುತ್ತದೆ. ಆಗಾಗ ಮಂಜು ಬೀಳುವುದೂ ಉಂಟು. ಅಂತೂ ಸಾಯಂಕಾಲ ಹೇಗೋ ದೇವಸ್ಥಾನದ ಒಳಗೆ ಹೋಗಿ ಗರ್ಭಗುಡಿಯ ಹೊರಗಿನಿಂದಲೇ ಸಿಂಗಾರ ಮಾಡಿಸಿಕೊಂಡಿರುವ ಕೇದಾರನಾಥನ ದರ್ಶನ ಮಾಡಿದೆವು. ಸಾಯಂಕಾಲ ಶೃಂಗಾರ ಆರತಿ ತುಂಬ ವಿಶೇಷ. ತುಂಬಾ ಜನರಿದ್ದುದರಿಂದ ನಮಗೆ ದೇವಸ್ಥಾನದ ಒಳಗೆ ನಿಂತು ಆರತಿ ನೋಡಲು ಸಾಧ್ಯವಾಗಲಿಲ್ಲ. ಆಗ ಮಳೆ ನಿಂತಿತ್ತು, ಹಾಗಾಗಿ ಹೊರಗೇ ನಿಂತು ಆರತಿಯನ್ನು ದೂರದಿಂದ ನೋಡಬೇಕಾಯಿತು. ಆರತಿ ಮುಗಿದ ಮೇಲೆ ಪೂಜಾರಿಗಳು ಹೊರ ಬಂದು ಭಕ್ತರಿಗೆಲ್ಲ ಆರತಿ ಪ್ರಸಾದವನ್ನು ಹಂಚಿದರು. ಅದೆಲ್ಲ ಮುಗಿಸಿಕೊಂಡು ಮತ್ತೆ ನಮ್ಮ ಕೋಣೆಗೆ ಬಂದ ನಾವು, ಕ್ಯಾಂಟೀನಿನಲ್ಲಿ ಊಟ ಮುಗಿಸಿ ಬಂದು ಮಲಗಿಕೊಂಡೆವು. ಮರುದಿನ ಚೋರಬಾರಿ ಸರೋವರ, ಭೈರವನಾಥನ ಮಂದಿರ – ಇವೆರಡನ್ನು ನೋಡಬೇಕು ಎಂದು ಮಾತನಾಡಿಕೊಂಡೆವು.

ಬೆಳಗ್ಗೆ ಐದೂವರೆ ಗಂಟೆಗೆ ಕೇದಾರನಾಥನ ಪೂಜೆ ಮಾಡಿಸುವುದಾಗಿ ಪಂಡಾ ಈ ಮೊದಲೇ ತಿಳಿಸಿದ್ದರಿಂದ, ಬೆಳಗ್ಗೆ ನಾಲ್ಕೂವರೆಗೇ ಎದ್ದು ನಿತ್ಯಕರ್ಮಾದಿಗಳನ್ನು ಮುಗಿಸಿದೆವು. ಮೈಕೊರೆಯುವ ಚಳಿಯಲ್ಲಿ ಒಂದು ಹೆಜ್ಜೆ ಇಡುವುದೂ ಕಷ್ಟವೆನಿಸುತ್ತಿತ್ತು. ಹೇಗೋ ಐದುಗಂಟೆಯ ಹೊತ್ತಿಗೆ ಸಿದ್ಧರಾದೆವು. ನಮ್ಮ ಪೂಜಾರಿ ಚಂದ್ರಶೇಖರ ಪಂಡಾನದೊಂದು ಅಂಗಡಿಯಿತ್ತು. ಅಲ್ಲಿಗೆ ಹೋಗಿ ನೋಡಿದರೆ ಆತ ಇನ್ನೂ ಬಂದಿಲಿಲ್ಲ. ಐದೂವರೆಯ ಹೊತ್ತಿಗೆ ಅವನು ಬಂದು ನಮ್ಮನ್ನು ಕರೆದುಕೊಂಡು ಹೋದ. ಅಷ್ಟು ಮುಂಜಾನೆಯೇ ಇಷ್ಟೊಂದು ಜನ ದೇವಸ್ಥಾನದೊಳಗೆ ಸೇರಿಕೊಂಡುಬಿಟ್ಟರಲ್ಲ ಎಂದು ಆಶ್ಚರ್ಯವೆನಿಸಿತು. ಪಂಡಾನ ಹಿಂದಿನಿಂದ ಜನಜಂಗುಳಿಯ ನಡುವೆ ಹೇಗೋ ಜಾಗ ಮಾಡಿ ಕೊಂಡು ಕೇದಾರನಾಥನ ಮಂದಿರದ



ಕೇದಾರನಾಥ ದೇವಾಲಯ

ಗರ್ಭಗೃಹದೊಳಗೆ ಕಾಲಿಟ್ಟೆವು. ಗರ್ಭಗೃಹ ಸಣ್ಣದೇ; ಆದರೆ ಕೇದಾರನಾಥನ ಉದ್ಭವಲಿಂಗ ಮೂರ್ತಿ ಆಕಾರದಲ್ಲಿ ದೊಡ್ಡದೇ. ವೃಷಭದ ಡುಬ್ಬದಂತಿರುವ ಶಿಲೆಯನ್ನು ನೋಡಿದಾಗ ಪಂಚಪಾಂಡವರ ಕಥೆ ನೆನಪಾಯಿತು. ಶಿವಲಿಂಗದ ಬಲಭಾಗದಲ್ಲಿ ನಾವು ನಾಲ್ಕೂ ಜನರು ಕುಳಿತು ಕೇದಾರನಾಥನ ಉದ್ಭವಲಿಂಗ ಸ್ಪರ್ಶ ಮಾಡಿ ಕೃತಾರ್ಥರಾದೆವು. ಶಿವನ ದರ್ಶನಾರ್ಥವಾಗಿ ಎಷ್ಟೋ ದೂರದಿಂದ ಬಂದಿರುವೆ, ಈ ಪಂಚಕೇದಾರದರ್ಶನವನ್ನು ಪೂರ್ಣಗೊಳಿಸು ಎಂದು ಬೇಡಿಕೊಂಡೆ. ಪೂಜಾರಿ ಮಂತ್ರ ಹೇಳುತ್ತಾ ಪೂಜೆ ಮಾಡಿಸಿ ನಮ್ಮ ಶಿರಗಳನ್ನು ಶ್ರೀಕೇದಾರಮೂರ್ತಿಗೆ ಸ್ಪರ್ಶಿಸಿದ. ಭಗವತ್ ಸ್ಪರ್ಶದಿಂದ ಪುನೀತರಾದ ಭಾವನೆ ನಮಗಾಯಿತು. ಹೆಚ್ಚು ಸಮಯ ಅಲ್ಲಿರಲು ಸಾಧ್ಯವೇ ಇಲ್ಲ – ಅಷ್ಟೊಂದು ಜನ ತುಂಬಿಕೊಂಡು ಬಿಟ್ಟಿದ್ದರು. ಪ್ರದಕ್ಷಿಣೆ ಹಾಕುತ್ತ ಒಂದು ಸುತ್ತು ಬಂದು ಗರ್ಭಗುಡಿಯ ಹೊರಗೆ ಬಂದೆವು. ದೇವಸ್ಥಾನದಲ್ಲಿ ಪಂಚ ಪಾಂಡವರ, ದ್ರೌಪದಿಯ ಮೂರ್ತಿಗಳನ್ನು ಒಂದೊಂದೆಡೆ ನಿಲ್ಲಿಸಿದ್ದಾರೆ. ಸಾಯಂಕಾಲ ಅವೆಲ್ಲ ಮೂರ್ತಿಗಳಿಗೂ ಆರತಿ ನಡೆಯುತ್ತದೆ. ಅವನ್ನೆಲ್ಲ ನೋಡುತ್ತ ದೇವಸ್ಥಾನದ ಹೊರಗೆ ಬಂದೆವು. ತಮ್ಮನ್ನು ಪಾಪದಿಂದ ಮುಕ್ತಗೊಳಿಸಿದ ಭಗವಂತನಿಗಾಗಿ ದೂರ ಹಿಮಾಲಯದ ಶೀತಲ ಪ್ರದೇಶದಲ್ಲಿ ಇಷ್ಟೊಂದು ಭವ್ಯ ದೇವಾಲಯವನ್ನು ಕಟ್ಟಿಸಿದ ಪಾಂಡವರಿಗೆ ಪೂಜೆ ಸಲ್ಲಬೇಕಾದದ್ದು ನ್ಯಾಯವೇ ಸರಿ ಅನ್ನಿಸಿತು.

**೬. ಚೋರಬಾರಿ ಸರೋವರ (ಗಾಂಧೀ ಸರೋವರ) :** ದರ್ಶನ, ಪೂಜೆಗಳನ್ನು ಮುಗಿಸಿ ಬಂದ ಪಂಡಾನಿಗೆ ದಕ್ಷಿಣೆ ಸಲ್ಲಿಸಿದೆವು. ಅವನು ನಮ್ಮ ಹೆಸರುಗಳನ್ನು ಅವನ ದೊಡ್ಡ ಕಡತದಲ್ಲಿ ನಮೂದಿಸಿಕೊಂಡು ಆಶೀರ್ವದಿಸಿದ. ಆಗಲೇ ಸುಮಾರು ಆರೂವರೆ ಗಂಟೆಯಾಗಿತ್ತು. ನಾನು, ಕರುಣಾಕರಾನಂದಜಿ ಹೋಟೆಲಿನಲ್ಲಿ ತಿಂಡಿ ಮುಗಿಸಿ, ನಮ್ಮ ಕೋಣೆಗೆ ಬಂದು ಅಗತ್ಯ ವಸ್ತುಗಳನ್ನು ಹೆಗಲ ಚೀಲದಲ್ಲಿ ತುಂಬಿಕೊಂಡು, ಚೋರಬಾರಿ ಸರೋವರಕ್ಕೆ ಹೊರಟೆವು. ಬೆಳಗ್ಗೆ ಸುಮಾರು ಏಳು ಗಂಟೆಯ ಹೊತ್ತು. ನಿನ್ನೆ ರಾತ್ರಿ ಮಳೆಯಾಗಿತ್ತು, ಅಲ್ಲಲ್ಲಿ ಮಂಜು ಕೂಡ ಬಿದ್ದಿದ್ದನ್ನು ಕಂಡೆವು. ಆದರೆ ಇಂದು ಬೆಳಗಿನ ಹೊತ್ತು ಆಗಸ ತಿಳಿಯಾಗಿದೆ, ಎಳೆ ಬಿಸಿಲು ಸುತ್ತಲೂ ಹಬ್ಬಿದೆ. ವಾತಾವರಣ ಅನುಕೂಲಕರವಾಗಿರುವಾಗಲೇ ಸರೋವರ ನೋಡಿ ಬರೋಣವೆಂದು ಬೇಗಬೇಗನೆ ಹೆಜ್ಜೆ ಹಾಕಿದೆವು. ಚೋರಬಾರಿ ಸರೋವರ ಕೇದಾರನಾಥದಿಂದ ನಾಲ್ಕು ಕಿಲೋಮೀಟರ್ ದೂರದಲ್ಲಿ ಉತ್ತರದಲ್ಲಿದೆ. ಕೇದಾರನಾಥ ಮಂದಿರ ಹಿಂಭಾಗದಲ್ಲಿರುವ ಹಿಮಾವೃತ ಬೆಟ್ಟಗಳ ಸಮೀಪದಲ್ಲಿದೆ ಈ ಸರೋವರ. ಸರೋವರ ಹೆಚ್ಚು ದೂರವಿರಲಾರದೆಂದು ನಾವು ಭಾವಿಸಿದ್ದೆವು. ಆದರೆ ನಡೆಯುತ್ತ ಹೋದಂತೆ ದಾರಿ ಇನ್ನಷ್ಟು ಮುಂದೆ ಸಾಗುತ್ತಿತ್ತು. ಹಿಮಾಲಯದಲ್ಲಿ ಒಂದು ಕಿಲೋಮೀಟರ್ ಕ್ರಮಿಸುವುದರಲ್ಲೇ ನಾಲ್ಕಾರು ಕಿಲೋಮೀಟರ್ ನಡೆದಂತೆ ಅನ್ನಿಸುತ್ತಿದೆ – ಆದರೆ ನಮಗಷ್ಟೇ; ಪಹಾಡಿಗಳನ್ನು ಕೇಳಿದರೆ, 'ಇಲ್ಲೇ ಹತ್ತಿರದಲ್ಲೇ – ಸ್ವಲ್ಪ ದೂರ ಅಷ್ಟೇ' ಅನ್ನುತ್ತಾರೆ. ಅವರ 'ಸ್ವಲ್ಪ' ಎಂದರೆ ಎಷ್ಟೋ, ನಮ್ಮ 'ತುಂಬಾ' ಎಂದರೆ ಎಷ್ಟೋ – ಯಾರು ಹೇಳಬೇಕು!

ನಡುವೆ ಒಂದು ಜಲಪಾತ ಎದುರಾಯಿತು. ಕೇದಾರನಾಥ ಮಂದಿರದ ಹಿಂಭಾಗದಲ್ಲಿ ಐದು ನದಿಗಳು ಹುಟ್ಟುತ್ತವೆ ಎಂದು ಸ್ಥಳೀಯ ಜನ ಹೇಳುತ್ತಾರೆ. ಅದರಲ್ಲಿ ಒಂದು ಈ ಜಲಪಾತ. ಬೆಟ್ಟದ ತುದಿಯಿಂದ ಧುಮುಕಿ ಸಾಗುವ ಈ ನದಿ ಸಾಕಷ್ಟು ರಭಸವಾಗಿಯೇ ಹರಿಯುತ್ತದೆ. ಅದು ಧುಮಿಕಿದ ಬಳಿಕ ಪರ್ವತದ ಬಂಡೆಗಳ ನಡುವೆ ನರ್ತಿಸುತ್ತಾ ಕೆಳಕ್ಕೆ ಸಾಗುತ್ತದೆ. ಆ ಬಂಡೆಗಳ ಮೇಲೆ ಒಂದು ಸೇತುವೆ ನಿರ್ಮಿಸಿದ್ದಾರೆ. ನಾವು ಜಲಪಾತದ ಸೊಬಗನ್ನು ನೋಡುತ್ತ ಸೇತುವೆ ದಾಟಿ ಮುಂದಕ್ಕೆ ಸಾಗಿದೆವು.

ನಾವು ಮುಂದಕ್ಕೆ ಸಾಗುತ್ತಿದ್ದಂತೆ ಕೇದಾರನಾಥ ಮಂದಿರ ದೂರ ಸಾಗುತ್ತಿತ್ತು. ಬೆಟ್ಟದ ಮೇಲಿಂದ ಕೇದಾರನಾಥದ ಇಡೀ ದೃಶ್ಯ ಕಾಣಿಸುತ್ತಿತ್ತು. ಮಂದಿರದ ಸುತ್ತ ಹಬ್ಬಿಕೊಂಡಿರುವ ಛತ್ರ, ಅಂಗಡಿಗಳೇ ಮೊದಲಾದ ಕಟ್ಟಡಗಳು, ಟೆಲಿಫೋನಿನ ಎರಡು ಟವರ್‌ಗಳು (ಬಿ.ಎಸ್.ಎನ್.ಎಲ್. ಮತ್ತು ಏರ್‌ಟೆಲ್), ಹಿಂಭಾಗದಲ್ಲಿ ನಾಲ್ಕೈದು ಸ್ರೋತಗಳು ಒಟ್ಟು ಸೇರಿ ಹರಿಯುವ ಮಂದಾಕಿನೀ ನದಿ – ಇವೆಲ್ಲವನ್ನೂ ನೋಡಿದೆವು. ಕೇದಾರನಾಥ ದೇವಾಲಯದ ಪ್ರದೇಶ ಹಾಗೂ ಅಕ್ಕಪಕ್ಕದ ಪರ್ವತಗಳಲ್ಲಿ ಎಲ್ಲೂ ಗಿಡಮರಗಳಿಲ್ಲ. ಸಮುದ್ರ ಮಟ್ಟದಿಂದ ೧೧,೭೫೦ ಅಡಿಗಳಷ್ಟು ಎತ್ತರದ ಈ ಪ್ರದೇಶದಲ್ಲಿ ಬರೀ ಕಲ್ಲುಬಂಡೆಗಳು, ಅಲ್ಲಲ್ಲಿ ಹುಲ್ಲಿನ ಪೊದೆಗಳು. ಒಂದು



ಚೋರಬಾರಿಗೆ ಸಮೀಪದ ಜಲಪಾತ



**ಚೋರಬಾರಿ ಸರೋವರ (ಗಾಂಧೀ ಸರೋವರ)**

ಬೆಟ್ಟದ ಕಡಿದಾದ ಪ್ರದೇಶವನ್ನು ಏರುತ್ತ ಹೋದಾಗ ಪರ್ವತದ ತುದಿಯಲ್ಲಿ ಕೆಲವು ಮಂದಿ ಗಂಡಸು, ಹೆಂಗಸರು ಹುಲ್ಲನ್ನು ಕೊಯ್ದು ತಮ್ಮ ದೊಡ್ಡ ಬುಟ್ಟಿಗಳಲ್ಲಿ ('ಕಂಡಿ' ಎನ್ನುತ್ತಾರೆ) ತುಂಬಿಸಿ ಒಯ್ಯುತ್ತಿದ್ದುದನ್ನು ಕಂಡೆವು. ಆ ಹುಲ್ಲನ್ನು ಕುದುರೆಗಳಿಗೆ (ಪೋನಿ ಅಥವಾ ಕಚ್ಚರ್) ತಿನ್ನಿಸುತ್ತಾರೆ. ಹಸಿರು ಹುಲ್ಲು ಇಡೀ ಬೆಟ್ಟವನ್ನು ಕವಿದಿತ್ತು. ಅಲ್ಲಲ್ಲಿ ಬಗೆಬಗೆಯ ಹೂಗಳು. ನಾನಾ ಬಗೆಯ ಕಡು ಬಣ್ಣಗಳಿಂದ ಕೂಡಿದ ಸಣ್ಣ ಹೂಗಳವು – ಬೆಟ್ಟವನ್ನೆಲ್ಲ ಅಲಂಕರಿಸಿದ್ದವು. ಸಣ್ಣ ಮಣಿಗಳನ್ನು ಪೋಣಿಸಿ ಮಾಡಿದ ಗುಚ್ಛದಂತಿದ್ದ ಪಾಟಲ ವರ್ಣದ ಒಂದು ಜಾತಿಯ ಹೂಗಳು ಅಲ್ಲಲ್ಲಿ ಕಾಣಿಸಿದವು (ಮುಂದೆ ರುದ್ರನಾಥದ ಬಳಿ ನಮ್ಮ ಗೈಡ್ ಅದರ ಹೆಸರನ್ನು ತಿಳಿಸಿದ್ದ – 'ಕಕಡೀ ಮಕಡೀ' ಅಂತ) ಹಿಮಾಲಯದ ತುಳಸಿ ಬೇರೆಯೇ ಒಂದು ಬಗೆಯದು; ಕಳೆದ ವರ್ಷ ಗೋಮುಖ, ತಪೋವನಕ್ಕೆ ಹೋಗಿದ್ದಾಗ ಅಲ್ಲಿನ ಮಾರ್ಗದರ್ಶಕ ಪಾಂಡೆ ಅದನ್ನು ಪರಿಚಯಿಸಿ ಕೆಲವೊಂದು ತುಳಸಿಯ ದಳಗಳನ್ನು ಕಿತ್ತುಕೊಟ್ಟಿದ್ದ. 'ಮುಂದೆ ಉಪಯೋಗಕ್ಕೆ ಬರುತ್ತದೆ. ಎತ್ತರದ ಪ್ರದೇಶಕ್ಕೆ ಹೋದಾಗ ಉಸಿರಾಟದ ತೊಂದರೆ ಯಾದರೆ ಇದನ್ನು ಮೂಸಿ ನೋಡಿ, ತುಸು ಆರಾಮವೆನಿಸುತ್ತದೆ' ಎಂದಿದ್ದ. ಅದು ಸಾಮಾನ್ಯ ತುಳಸಿಯಂತಲ್ಲ , ಸಣ್ಣ ಎಲೆಗಳಿಂದ ಕೂಡಿದ್ದು, ಆದರೆ ಅದರ ವಾಸನೆ ಮಾತ್ರ ಪ್ರಖರ. ಒಂದು ಬಗೆಯ ಘಾಟು ಎನ್ನಬಹುದು. ಅಂಥದೇ ಗಿಡ ಇಲ್ಲೂ ಕಾಣಿಸಿಕೊಂಡಾಗ ಒಂದೆರಡು ಎಲೆಗಳನ್ನು ಕೊಯ್ದು ಮೂಸತೊಡಗಿದೆ. ಆಗ ಕರುಣಾಕರಾನಂದರು, ''ಹಾಗೇನೂ ಮಾಡಬೇಡಿ, ಗೊತ್ತಿಲ್ಲದೆ ಮೂಸಿ, ರುಚಿನೋಡಿ ಏನಾದರೂ ಹೆಚ್ಚುಕಡಿಮೆಯಾದೀತು. ಹಿಮಾಲಯದ ಕೆಲವು ಗಿಡಗಳು ತುಂಬಾ ಅಪಾಯಕಾರಿ'' ಎಂದರು. ಆಗ ನನಗೂ ಹೆದರಿಕೆಯಾಗಿ ಹಾಗೆ ಮಾಡುವುದನ್ನು ಬಿಟ್ಟುಬಿಟ್ಟೆ.

ನಾವೀಗ ಬೆಟ್ಟದ ತುದಿಯನ್ನು ಏರಿಬಿಟ್ಟಿದ್ದೆವು. ಇನ್ನೂ ಮುಂದಕ್ಕೆ ದಾರಿ ಸಾಗುತ್ತಿದೆ. ಅದೋ! ದೂರದಲ್ಲಿ ಹಿಮಾಚ್ಛಾದಿತ ಬೆಟ್ಟಗಳ ಕೆಳಗಡೆ ನಾನಾ ಬಂಡೆಗಳ ನಡುವಿನಿಂದ ಮಂದಾಕಿನೀ ನದಿ ಹೊರ ಹೊಮ್ಮಿ ಪ್ರವಹಿಸುತ್ತಿದೆ! ಅದೇ ನಮಗೆ ಕಾಣಿಸುವಂತೆ ಮಂದಾಕಿನಿಯ ಉಗಮ. ಆ ಬಂಡೆಗಳ ತಳಭಾಗದಲ್ಲೆಲ್ಲ ದೊಡ್ಡ ಮಂಜುಗಡ್ಡೆಯ ಬೆಟ್ಟವಿದೆಯೆಂದೂ, ಅಲ್ಲೆಲ್ಲ ಓಡಾಡುವುದು ಅಪಾಯಕರ ವೆಂದೂ ಅನಂತರ ಯಾರೋ ಹೇಳಿದರು. ಅಲ್ಲಿಂದ ನೋಡಿದಾಗ ಹಿಮಪರ್ವತ ಕರಗಿ ನೀರಾಗಿ ಪ್ರವಹಿಸುವಂತೆ ಕಾಣಿಸುತ್ತಿತ್ತು. ನಾವು ಬಂದಲ್ಲಿಂದ ತುಂಬ ತಗ್ಗಿನ ಕಣಿವೆಯಲ್ಲಿ ಮಂದಾಕಿನೀ ನದಿ ಹರಿಯುತ್ತ, ಮುಂದೆ ಕೇದಾರನಾಥ ದೇವಾಲಯದ ಹಿಂಭಾಗದಲ್ಲೇ ಮುಂದಕ್ಕೆ ಪಯಣಿಸುತ್ತಿದ್ದುದನ್ನು ನಾವು ನೋಡಿ ಆನಂದಗೊಂಡೆವು.

ಇನ್ನೂ ತುಸು ಎತ್ತರಕ್ಕೆ ಏರಿಹೋದಾಗ ಚೋರಬಾರಿ ಸರೋವರ ಕಾಣಿಸಿತು. ಅದಕ್ಕೆ ಇತ್ತೀಚೆಗೆ ಗಾಂಧೀ ಸರೋವರವೆಂದು ಕರೆಯುತ್ತಾರೆ. ಅಲ್ಲಿ ಮಹಾತ್ಮಾ ಗಾಂಧೀಜಿಯವರ ಅಸ್ಥಿವಿಸರ್ಜನೆ ಮಾಡಿದ್ದಾರಂತೆ. 'ಚೋರಬಾರಿ' ಎಂದರೆ ಮರಳು ತುಂಬಿ, ಗಟ್ಟಿಯಾದ ಕೆಸರು ಎಂದರ್ಥ. ದೂರದಿಂದ ನೋಡುವಾಗ ಗಟ್ಟಿಯಾಗಿರುವಂತೆ ಕಾಣಿಸುತ್ತದೆ. ನಡೆದಾಡಿದರೆ ಮಾತ್ರ ಕೆಸರಿನಲ್ಲಿ ಮುಳುಗಿಬಿಟ್ಟೀರಿ.

ವಿಶಾಲವಾದ ಸರೋವರದಲ್ಲಿ ಹೆಚ್ಚು ನೀರಿರಲಿಲ್ಲ. ಹತ್ತಿರದಲ್ಲೇ ಒಂದು ಹಿಮಗಡ್ಡೆ ನೀರನ್ನು ಸ್ಪರ್ಶಿಸಿಕೊಂಡು, ಮೇಲಕ್ಕೆ ದೊಡ್ಡ ಒಂದು ಪರ್ವತವನ್ನು ಆಧರಿಸಿ ನಿಂತಿತ್ತು. ಬಹುಶಃ ಅದೇ ಕರಗಿ ಸರೋವರದ ನೀರಾಗಿರಬೇಕು. ಸರೋವರದ ಇನ್ನೊಂದು ಮೂಲೆಯಲ್ಲಿ ಇನ್ನೊಂದು ದೊಡ್ಡ ಹಿಮಬಂಡೆ ನಿಂತಿತ್ತು. ಅದರ ಬಳಿಯಲ್ಲೇ ಒಂದು ಸಣ್ಣ ತೊರೆ ಬಂದು ಬೀಳುತ್ತಿತ್ತು. ಅದರ ಧ್ವನಿ ದೂರದಿಂದ ಕೇಳುವುದು ಬಿಟ್ಟರೆ ಉಳಿದೆಲ್ಲವೂ ನಿಶ್ಶಬ್ದ. ಸರೋವರದ ಹತ್ತಿರಕ್ಕೆ ಹೋಗಿ, ಒಂದೆಡೆ ಸ್ವಚ್ಛವಾದ ಬಂಡೆಗಳನ್ನು ಹುಡುಕಿ, ಅಲ್ಲಿ ಕುಳಿತುಬಿಟ್ಟೆವು. ಅದೆಂಥ ನೀರವ, ಶಾಂತ ಪರಿಸರ! ಕಣ್ಣೆದುರಿಗೆ ಹಿಮಾವೃತ ಶಿಖರಗಳು, ನೀರಿನಲ್ಲಿ ಅದರ ಪ್ರತಿಬಿಂಬ, ಎತ್ತರದಲ್ಲಿ ನೀಲಾಕಾಶ! ಆ ಶಾಂತತೆಯನ್ನು ಅನುಭವಿಸುತ್ತ ಸುಮಾರು ಅರ್ಧ ಗಂಟೆ ಕಳೆದೆವು. ನಡೆದು ಆಯಾಸಗೊಂಡಿದ್ದ ನಾವು ಒಣದ್ರಾಕ್ಷಿ, ಬಾದಾಮಿ, ಗೋಡಂಬಿ ಇತ್ಯಾದಿಗಳನ್ನು ತಿಂದು ನೀರು ಕುಡಿದೆವು. ಗಾಢವಾದ ಧ್ಯಾನಕ್ಕೆ ಇಂಥ ಪರಿಸರ ಸೂಕ್ತ ಎಂದು ಭಾವಿಸಿದೆವು. ಆದರೆ ಅದು ಅಸಾಧ್ಯವೆಂದು ಅನಂತರ ನಮಗೆ ಮನವರಿಕೆಯಾಯಿತು. ಅಲ್ಲಿ ಹೊತ್ತುಹೊತ್ತಿಗೂ ವಾತಾವರಣ ಬದಲಾಗುತ್ತಿರುತ್ತದೆ. ಇದ್ದಕ್ಕಿದ್ದಂತೆ ಮೋಡ ಮುಸುಕಿ, ಏನೂ ಕಾಣದಂತಾಗುತ್ತದೆ. ಜೋರಾಗಿ ಮಳೆ ಬಂದರೂ ಬಂದೀತು. ನಮ್ಮ ಅದೃಷ್ಟದಿಂದ ಆ ಹೊತ್ತು ವಾತಾವರಣ ತಿಳಿಯಾಗಿತ್ತು. ನಾವು ಸರೋವರ ಇಳಿದು ಬರಬೇಕಾದರೆ ಮೇಲೆ ಎತ್ತರದಲ್ಲಿ ಮೋಡ ಮುಸುಕಿ, ಮಳೆಯಾಗುವ ಲಕ್ಷಣ ಕಾಣಿಸಿತು. ಯಾರೋ ಇಬ್ಬರು ಯಾತ್ರಿಕರು ಚೋರಬಾರಿ ಸರೋವರಕ್ಕೆ ಹೊರಟಿದ್ದವರು, ''ಕ್ಯಾ ಮಹಾತ್ಮಾಜೀ, ಉಧರ್ ಮೌಸಮ್ ಬಢಿಯಾ ಹೈ?'' ('ಏನು ಸ್ವಾಮಿಜಿ, ಅಲ್ಲಿ ವಾತಾವರಣ ಚೆನ್ನಾಗಿದೆಯೆ?') ಎಂದು ಆತಂಕದಿಂದ ಕೇಳಿದ್ದರು. ''ನಾವು ಹೋದಾಗ ಚೆನ್ನಾಗಿತ್ತು, ಈಗ ನಿಧಾನವಾಗಿ ಮೋಡ ಬರುವಂತಿದೆ'' ಎನ್ನುತ್ತಾ ನಾವು ಇಳಿದು ಬರತೊಡಗಿದೆವು. ಕೇದಾರನಾಥಕ್ಕೆ ಹಿಂದಿರುಗಿದಾಗ ೯.೪೫ ಆಗಿತ್ತು. ನಡೆದು ತುಂಬಾ ಆಯಾಸಗೊಂಡ ನಾವು ಮಧ್ಯಾಹ್ನದ ತನಕವೂ ಚೆನ್ನಾಗಿ ವಿಶ್ರಾಂತಿ ಪಡೆದೆವು. ಸಾಯಂಕಾಲ ಭೈರವನಾಥನ ಮಂದಿರ ನೋಡಿ ಬರೋಣವೆಂದು ಮಾತನಾಡಿಕೊಂಡಿದ್ದೆವು.

**೭. ಭೈರವನಾಥನ ಮಂದಿರ :** ಮಧ್ಯಾಹ್ನ ಊಟಮಾಡಿ ಬಂದು ಮಲಗಿ ಕೊಂಡಾಗ ಹೊರಗೆಲ್ಲ ಮಳೆಯಾಗುತ್ತಿತ್ತು . ಕೇದಾರದಲ್ಲಿ ಮಳೆಯಾಯಿತೆಂದರೆ ಮಿತಿಮೀರಿದ ಶೈತ್ಯ ಅನುಭವಕ್ಕೆ ಬರುತ್ತದೆ.



ಭೈರವನಾಥ ಮಂದಿರ

ಹಾಸಿಗೆಯಲ್ಲಿ ಚೆನ್ನಾಗಿ ಹೊದ್ದು ಮಲಗಿರಬೇಕೆಂದು ಅನ್ನಿಸುತ್ತದೆ. ಅಂಥ ಚಳಿಯಲ್ಲಿ ನಿದ್ದೆ ಹತ್ತಿಕೊಂಡರೆ ಹೊತ್ತುಗೊತ್ತು ಏನೂ ತಿಳಿಯದು.

ಸಾಯಂಕಾಲ ಸುಮಾರು ನಾಲ್ಕುಗಂಟೆಯ ಹೊತ್ತಿಗೆ ಹೊರ ಬಂದು ನೋಡಿದರೆ, ಸಣ್ಣಗೆ ಮಳೆ ಜಿನುಗುತ್ತಿತ್ತು. ಭೈರವನಾಥನ ಮಂದಿರವಿರುವುದು ಕೇದಾರನಾಥ ಮಂದಿರದಿಂದ ಪೂರ್ವಭಾಗ ಕ್ಕಿರುವ ಒಂದು ಪರ್ವತದ ಮೇಲೆ. ಅಲ್ಲಿಗೆ ಹೋದಾಗ, 'ಮಳೆ ಹೆಚ್ಚಾದರೆ ಏನುಗತಿ?' ಎಂದು ಭಾವಿಸಿದರೂ, ರೈನ್‌ಕೋಟ್ ಇದೆ ಯಲ್ಲ, ಹೇಗಾದರೂ ನೋಡಿ ಬರುವುದೇ, ಎಂದು ಹೊರಟೇ ಬಿಟ್ಟೆವು.

ಅಂಗಡಿಗಳು, ಪ್ರವಾಸೀ ಬಂಗಲೆ, ಲಾಡ್ಜು ಇತ್ಯಾದಿಗಳನ್ನೆಲ್ಲ ದಾಟಿ, ಖಾಲಿ ಮೈದಾನ ಪ್ರದೇಶಕ್ಕೆ ಬಂದು ಬೆಟ್ಟವೇರತೊಡಗಿದಾಗ ಕೇದಾರನಾಥ ಮಂದಿರ ಹಾಗೂ ಸುತ್ತಮುತ್ತಲಿನ ಕಟ್ಟಡಗಳೆಲ್ಲ ಸ್ಪಷ್ಟ ವಾಗಿ ಕಾಣಿಸತೊಡಗಿದವು. ತುಸು ದೂರದಲ್ಲಿ ಎರಡು ಹೆಲಿಪ್ಯಾಡ್, ಬಂದುಹೋಗುತ್ತಿರುವ ಹೆಲಿಕಾಪ್ಟರ್‌ಗಳು, ಅಲ್ಲಿಗೆ ಹೋಗುವ – ಬರುವ ಯಾತ್ರಿಕರೆಲ್ಲಾ ಕಾಣಿಸಿದರು. ಸ್ವಲ್ಪ ಹೊತ್ತಿನಲ್ಲೇ ಮಳೆ ಜೋರಾಯಿತು. ರೈನ್‌ಕೋಟ್ ಮೊದಲೇ ಹಾಕಿಕೊಂಡಿದ್ದೆವು. ಆದರೂ ಮಳೆ ಜೋರಾದಂತೆಲ್ಲ ಚಳಿ ಅಸಾಧ್ಯವೆನಿಸಿತು. ಜೋರಾಗಿ ನಡೆದರೆ ಮೈ ಬೆಚ್ಚಗಾಗಿ ಚಳಿಯ ಅನುಭವವೂ ಕಡಿಮೆಯಾದೀ ತೆಂದು ಜೋರಾಗಿ ಬೆಟ್ಟವನ್ನೇರತೊಡಗಿದೆವು. ಸ್ವಲ್ಪದೂರದಲ್ಲಿ ಭೈರವನಾಥನ ಮಂದಿರ. ಎತ್ತರವಾದ ವೇದಿಕೆಯ ಮೇಲೆ ಸ್ಥಾಪಿಸ ಲಾಗಿದ್ದ ಐದಾರು ಶಿಲೆಯ ವಿಗ್ರಹಗಳಿಗೆ ಗಂಧ, ಕುಂಕುಮ ಹಚ್ಚಿ ದ್ದರು. ಅಲ್ಲೇ ಪ್ರವೇಶದ್ವಾರದಲ್ಲಿ ಇದ್ದ ಗಂಟೆ ಬಾರಿಸಿ, ಕೇದಾರ ನಾಥದ ರಕ್ಷಕ ದೇವತೆಗೆ ನಮ್ಮ ನಮನ ಸಲ್ಲಿಸಿ ಕೃತಾರ್ಥರಾದೆವು.

ಚಳಿ ತಡೆಯಲಸಾಧ್ಯವಾಗಿತ್ತು. ಕೈಗಳಲ್ಲಿ ರಕ್ತದ ಓಡಾಟ ನಿಂತು ಹೋಗಿ ಮರಗಟ್ಟಿಬಿಟ್ಟಿದ್ದವು. ಎರಡೂ ಕೈಗಳನ್ನು ಉಜ್ಜಿಕೊಂಡು ರಕ್ತ ಸಂಚಾರ ಮತ್ತೆ ಆರಂಭವಾಗುವಂತೆ ಮಾಡಿದೆ. ಪರ್ವತವಿಳಿದು, ಮರಳಿ ಕೇದಾರನಾಥಕ್ಕೆ ಬರುವಷ್ಟರಲ್ಲಿ ಸಾಕುಸಾಕಾಯಿತು. ಅಂದು ರಾತ್ರಿ ವಿಪರೀತ ಮಳೆ ಸುರಿದಿದ್ದರಿಂದ ನಾವು ಹೆಚ್ಚೇನೂ ಓಡಾಡದೆ, ಕೊಣೆಯಲ್ಲೇ ಮಲಗಿ ವಿಶ್ರಾಂತಿ ಪಡೆದೆವು.

ಮರುದಿನ ಪ್ರಾತಃಕಾಲ ಇನ್ನೊಮ್ಮೆ ಕೇದಾರನಾಥನ ದರ್ಶನ ಮಾಡಿ, ಚಂದ್ರಶೇಖರ ಪಂಡಾ ಮಾಡಿಕೊಟ್ಟ ಬಿಸಿಬಿಸಿ ಚಹಾ ಕುಡಿದು, ಮರಳಿ ಗೌರೀಕುಂಡಕ್ಕೆ ಹೊರಟೆವು. ದಾರಿ ಮಧ್ಯೆ ನನಗೆ ತಡೆಯಲಸಾಧ್ಯವಾದ ವಾಂತಿಭೇದಿ ಶುರುವಾಗಿ, ತುಂಬಾ ತೊಂದರೆ ಯಾಯಿತು. ಮಣಭಾರ ಲಗೇಜು ಬೇರೆ. ನಡುನಡುವೆ ವಿಶ್ರಾಂತಿ ತೆಗೆದು ಕೊಂಡು, ನಿತ್ರಾಣವಾದಾಗ ಕಣ್ಣುಕತ್ತಲೆ ಬಂದಂತಾಗಿ ಸುಧಾರಿಸಿಕೊಳ್ಳಬೇಕಾಯಿತು. ನನ್ನ ಅವಸ್ಥೆಯನ್ನು ನೋಡಿದ ಕರು ಣಾಕರಾನಂದರು, ''ಬನ್ನಿ, ನಿಮಗೆ ಒಂದು ಕುದುರೆ ಬುಕ್ ಮಾಡು ತ್ತೇನೆ. ನೀವು ನಡೆಯಲಾರಿರಿ'' ಎಂದರು. ನನಗೆ ಕುದುರೆಯ ಮೇಲೆ ಯಾತ್ರೆ ಹೊರಟವರ ಯಾತನೆ ಕೇಳಿ ಗೊತ್ತು. ಮೊದಲು ಸ್ವಲ್ಪಹೊತ್ತು ಯಾತ್ರೆ ಚೆನ್ನಾಗಿರುತ್ತದೆ. ಅನಂತರ ಹಿಂಭಾಗ ಪೂರ್ತಿ ಯಾಗಿ ಕಿತ್ತು ಬರುವಂತಾಗುತ್ತದೆ. ಎಷ್ಟೇ ತೊಂದರೆಯಾಗಲಿ, ನಡೆ ಯುವುದೇ ಸರಿ ಎಂದುಕೊಂಡು ಹೇಗೋ ನಡೆಯುತ್ತಾ ಹೊರಟೆ. ೫.೩೦ಕ್ಕೆ ಹೊರಟ ವರು ೮.೩೦ – ೯.೦೦ ರ ನಡುವೆ ತಲುಪ ಬೇಕಾಗಿತ್ತು; ಆದರೆ ಈಗ ನಾವು ಗೌರೀಕುಂಡ ತಲುಪಿದಾಗ ೧೧.೩೦ ಆಗಿಬಿಟ್ಟಿತ್ತು. ಅಂದು ಮಧ್ಯಾಹ್ನವೇ ಮುಂದಿನ ಕೇದಾರಕ್ಕೆ (ಮದ್ದ ಮಹದೇಶ್ವರ) ಹೊರಡಬೇಕೆಂದುಕೊಂಡಿದ್ದೆವು. ನನಗೆ ವಿಪರೀತ ನಿಶ್ಶಕ್ತಿ, ಅನಾರೋಗ್ಯ. ಅಂದಂತೂ ಹೇಗೂ ಹೊರಡುವಂತಿರಲಿಲ್ಲ. ಭಾರತ ಸೇವಾಶ್ರಮಕ್ಕೆ ಮರಳಿ ಬಂದೆವು. ಅಲ್ಲಿನ ಸ್ವಾಮಿಗಳು ಏನೋ ಔಷಧಿ ಕೊಟ್ಟರು. ಅದರಿಂದ ಹೆಚ್ಚೇನೂ ಉಪಯೋಗ ವಾಗಲಿಲ್ಲ. ಮರುದಿನವೂ ನಾವು ಗೌರೀಕುಂಡದಲ್ಲಿ ತಂಗಬೇಕಾ ಯಿತು. ಅಂದು ಬೆಳಗ್ಗೆ ಮೆಡಿಕಲ್ ಶಾಪ್‌ನಲ್ಲಿ ಪರೀಕ್ಷೆ ಮಾಡಿಸಿ ಕೊಂಡೆ. ಅವರು ಒಳ್ಳೆಯ ಔಷಧವನ್ನೇ ಕೊಟ್ಟಿದ್ದರು. ಮರುದಿನ ಬೆಳಗ್ಗೆ, ಅಂದರೆ ೧೧ನೇ ತಾರೀಖಿನಂದು ನಾನು ಮುಂದಿನ ಪ್ರಯಾಣಕ್ಕೆ ತಯಾರಾಗಿಬಿಟ್ಟಿದ್ದೆ. ಹಿಂದಿನ ದಿನ ಗೌರೀಕುಂಡದಲ್ಲಿ ವಿಶ್ರಾಂತಿ ಪಡೆಯುತ್ತಿದ್ದಾಗ, 'ಹೇಗಾದರೂ ನಾನು ಮುಂದಿನ ಪ್ರಯಾಣ ಮುಂದುವರೆಸುವಂತಾಗಲಿ' ಎಂದು ದೇವರನ್ನು ಪ್ರಾರ್ಥಿಸಿಕೊಂಡಿದ್ದೆ. ಆರೋಗ್ಯ ಇನ್ನಷ್ಟು ಹದಗೆಟ್ಟಿದ್ದರೆ ಪಂಚ ಕೇದಾರ ಯಾತ್ರೆ ಪೂರ್ಣಗೊಳ್ಳದೆ ಹೋಗುತ್ತದಲ್ಲಾ ಎಂದು ನಾನು ದುಃಖಿಸಿದ್ದೆ. ಜಗನ್ಮಾತೆಯ ಕೃಪೆ, ಹಾಗಾಗಲಿಲ್ಲ.

*(ಮುಂದುವರಿಯುವುದು)*

ನಿನ್ನ ಮನಸ್ಸಿಗಿಂತ ಉತ್ತಮ ಗುರು ಇನ್ನೊಬ್ಬನಿಲ್ಲವೆಂದೇ ತಿಳಿ! ಪ್ರಾರ್ಥನೆ, ಧ್ಯಾನಗಳಿಂದ ಮನಸ್ಸು ಪರಿಶುದ್ಧವಾದಾಗ ಅದು ನಿನ್ನನ್ನು ಒಳಗಿನಿಂದಲೇ ಸರಿಯಾದ ಮಾರ್ಗದಲ್ಲಿ ಮುನ್ನಡೆಸುವುದು. ನಿನ್ನ ದೈನಂದಿನ ಚಟುವಟಿಕೆಗಳ ನಡುವೆ ಕೂಡ ಈ ಅಂತರಂಗದ ಗುರು, ನೀನು ಗುರಿ ತಲುಪುವ ವರೆಗೂ ದಾರಿ ತೋರುವನು. ದೇವರ ಮೇಲೆ ಎಣೆಯಿಲ್ಲದ ಪ್ರೀತಿಯನ್ನು ಹೊಂದಿರು, ಆಗ ನಿನ್ನ ಮನಸ್ಸು ಯಾವಾಗಲೂ ಶಾಂತವಾಗಿಯೂ, ಶುದ್ಧವಾಗಿಯೂ ಇರುವುದು.

*– ಸ್ವಾಮಿ ಬ್ರಹ್ಮಾನಂದ*

# ಅಸಿಸ್ಸಿಯ ಸಂತ ಫ್ರಾನ್ಸಿಸ್

ಭಾಗ ೧

ಸ್ವಾಮಿ ವೀರೇಶಾನಂದ

ಇಟೆಲಿಯ ಒಬ್ಬ ಕ್ರೈಸ್ತ ಸಂತನು ಗುಬ್ಬಿಯೊ ಎಂಬ ನಗರಕ್ಕೆ ಹೋದನು. ಅಲ್ಲಿ ಸ್ವಲ್ಪಕಾಲ ವಸತಿ ಹೂಡಿದನು. ಆ ಕಾಲದಲ್ಲಿ ಆ ಊರಿನಲ್ಲಿ ಒಂದು ಸಮಸ್ಯೆ ತಲೆದೋರಿತ್ತು. ಒಂದು ತೋಳ ಊರಿಗೆ ಬಂದು ಜನರನ್ನು ಹೆದರಿಸುತ್ತಿತ್ತು. ಸಾಕುಪ್ರಾಣಿಗಳನ್ನಲ್ಲದೆ ಮನುಷ್ಯ ರನ್ನೂ ಕಬಳಿಸುತ್ತಿತ್ತು. ಸಂತನಿಗೆ ಊರ ಜನರ ದುರವಸ್ಥೆಯನ್ನು ಕಂಡು ಅನುಕಂಪ ಹುಟ್ಟಿತು. ಅವನು ಊರಿನ ಹತ್ತಿರದ ಗುಡ್ಡವನ್ನು ಹತ್ತಿದನು. ಆ ಕ್ರೂರಜಂತುವನ್ನು ತಾನೇ ಹುಡುಕಿಕೊಂಡು ನಡೆದನು. ತೋಳದ ಭಯದಿಂದ ಅವನ ಸಂಗಾತಿಗಳೆಲ್ಲ ಕಾಲುಕಿತ್ತರು. ಇವನು ಮಾತ್ರ ಏಕಾಂಗಿಯಾಗಿ ನಡೆದುಕೊಂಡು ಹೋಗುತ್ತಲೇ ಇದ್ದನು. ಕಡೆಗೆ ತೋಳ ಅವನಿಗೆ ಸಿಕ್ಕಿಯೇ ಬಿಟ್ಟಿತು. ಅವನು ಶಿಲುಬೆಯ ಸಂಜ್ಞೆ ಯನ್ನು ಮಾಡಿ, ತನ್ನ ಹತ್ತಿರ ಬರುವಂತೆ ಹೇಳಿದನು. ಯಾರನ್ನೂ ಹಿಂಸಿಸಬೇಡೆಂದು ಅದಕ್ಕೆ ಆದೇಶವಿತ್ತನು. ಸಂತನ ಆಧ್ಯಾತ್ಮಿಕ ಶಕ್ತಿಯ ಎದುರಿಗೆ ಆ ಭೀಕರ ತೋಳವು ಮಣಿಯಿತು. ಆ ಕ್ರೂರ ಜಂತುವು ಸಂತನ ಪಾದದಡಿಯಲ್ಲಿ ವಿನಮ್ರವಾಗಿ ಬಿದ್ದುಕೊಂಡಿತು. ತನ್ನ ಸಾಂತ್ವನಭರಿತ ಮಧುರ ಮಾತುಗಳ ಮೂಲಕ ಆ ಸಂತನು ಹೀಗೆಂ ದನು: ''ಅಪ್ಪಾ ಸಹೋದರ ತೋಳವೇ, ಇಲ್ಲಿನ ಜನರಿಗೆ ಅದೆಷ್ಟು ತೊಂದರೆ ಕೊಟ್ಟಿರುವೆ ನೀನು! ಓ, ಅದೆಷ್ಟು ಕೆಡುಕನ್ನು ಉಂಟುಮಾಡಿ ರುವೆ ನೀನು! ಎಲ್ಲರೂ ನಿನ್ನನ್ನು ನಿಂದಿಸುವವರೇ. ಎಲ್ಲರೂ ನಿನಗೆ ಶಪಿಸುವವರೇ. ಆದರೆ ನಾನು ಹಾಗೆ ಮಾಡುವುದಿಲ್ಲ. ನೀನು ಮತ್ತು ಇಲ್ಲಿನ ಜನರ ನಡುವೆ ಶಾಂತಿ ಉಂಟುಮಾಡಲು ಬಂದವನು ನಾನು.''

ಹೀಗೆಂದು ಆ ಸಂತನು ತೋಳವನ್ನು ಊರಿಗೆ ಕರೆದುಕೊಂಡು ಹೋದನು. ಆಶ್ಚರ್ಯಚಕಿತರಾದ ಜನರು ಅವನನ್ನು ಸುತ್ತುವರಿದರು. ಸಂತನು ತೋಳ ಮತ್ತು ಜನರ ನಡುವೆ ಶಾಂತಿ ಒಪ್ಪಂದ ಮಾಡಿ ಸಿದನು. ತೋಳವು ಹಸಿವೆಯಿಂದ ತಾನೇ ಈ ಬಗೆಯ ಕ್ರೂರಕಾರ್ಯ ಮಾಡಿದ್ದು! ಜನರೆಲ್ಲ ನಿಯಮಿತವಾಗಿ ತೋಳಕ್ಕೆ ಆಹಾರ ಒದಗಿಸಿ ಕೊಡಬೇಕು. ತೋಳವು ಇನ್ನುಮುಂದೆ ಜನರ ಮೇಲೆ ಹಲ್ಲೆ ಮಾಡುವು ದನ್ನು ನಿಲ್ಲಿಸಬೇಕು. ಇದೇ ಆ ಒಪ್ಪಂದ. ಹೀಗೆ ಗುಬ್ಬಿಯೊ ಎಂಬ ಆ ಊರು ತೋಳದ ಹಾವಳಿಯಿಂದ ಮುಕ್ತವಾಯಿತು. ಇದಲ್ಲದೆ ಊರಿನ ನಾಯಿಗಳು ಮತ್ತು ಆ ತೋಳದ ನಡುವೆಯೂ ಆ ಸಂತನು ಶಾಂತಿ ಒಪ್ಪಂದವನ್ನು ಮಾಡಿಸಿದನು. ಊರಿನ ನಾಯಿಗಳು ತೋಳದ ಮೇಲೆ ದಾಳಿ ಮಾಡದಂತೆ ವಿಧಿಸಿದನು. ಇನ್ನುಮುಂದೆ ತೋಳವು ಯಾವುದೇ ತೊಂದರೆ ಕೊಡುವುದಿಲ್ಲವೆಂಬುದಕ್ಕೆ ಸಾಕ್ಷಿಯಾಗಿ ಆ ತೋಳವನ್ನು ಕ್ರೈಸ್ತಧರ್ಮದ ವಿಧಿಯಂತೆ ಅನುಗ್ರಹಿಸಿದನು.

ಅಷ್ಟು ಮಾತ್ರವಲ್ಲ, ಈ ಸಂತನು ಭಗವಂತನ ಸೃಷ್ಟಿಯೆಲ್ಲವನ್ನೂ ತನ್ನ ಬಂಧುಗಳೆಂದೇ ಎಣಿಸಿದ್ದನು. ಒಮ್ಮೆ ಅವನು ತನ್ನ ಸಂಗಡಿಗ ರೊಡನೆ ನಡೆದುಹೋಗುತ್ತಿದ್ದನು. ಎರಡೂ ಕಡೆ ಮರಗಳ ತುಂಬೆಲ್ಲ



ತೋಳದೊಂದಿಗೆ ಮಾತುಕತೆ

ಪಕ್ಷಿಗಳು ನೆರೆದಿದ್ದ ರಸ್ತೆಯೊಂದನ್ನು ತಲುಪಿದನು. ತನ್ನ ಸಹಚರರಿಗೆ ಹೇಳಿದನು, ''ಇಲ್ಲೇ ಇರಿ. ನಾನು ನನ್ನ ಅಕ್ಕತಂಗಿಯರಾದ ಪಕ್ಷಿಗಳಿಗೆ ಉಪದೇಶ ಕೊಟ್ಟು ಬರುತ್ತೇನೆ.'' ಮುಂದೆ ನಡೆದ ಸಂತನು ತನ್ನ ಕರುಣಾಪೂರಿತ ಮಾರ್ದವ ಧ್ವನಿಯಿಂದ ಉಪದೇಶಿಸಲು ಆರಂಭಿಸಿ ದನು. ಅವನ ಸುತ್ತಲೂ ಪಕ್ಷಿಗಳು ನೆರೆದವು. ತಮಗೆ ಚಿರಪರಿಚಿತ ರೆಂಬಂತೆ ಸಲುಗೆಯಿಂದ ಅವನೊಡನೆ ವರ್ತಿಸಿದವು. ಅವನ ಉಪ ದೇಶವನ್ನು ಆಲಿಸಿದವು. ಅವುಗಳಲ್ಲಿ ಒಂದು ಪಕ್ಷಿ ಕೂಡ ಹಾರಿ ಹೋಗಲಿಲ್ಲ. ಆ ಸಂತನ ಕೆಲವು ಚಿತ್ರಗಳಿವೆ. ಅವುಗಳಲ್ಲಿ ಅವನು ಪಕ್ಷಿಗಳಿಗೆ ಉಪದೇಶಿಸುತ್ತಿರುವ ದೃಶ್ಯ ಕಂಡುಬರುತ್ತದೆ.

ಈ ಮೃದುಮಧುರ ಸ್ವಭಾವದ ಸಂತನು ಬಡವರ ಬಂಧು ವಾಗಿದ್ದನು. ಬಡತನದ ಜೀವನವನ್ನು ತಾನಾಗಿಯೇ ಅಪ್ಪಿಕೊಂಡಿ ದ್ದನು. ಪ್ರಾಣಿಗಳು, ಪಕ್ಷಿಗಳು, ಗಿಡಮರಗಳು, ನೈಸರ್ಗಿಕ ಶಕ್ತಿಗಳಾದ ಸೂರ್ಯ ಮತ್ತು ಚಂದ್ರರಿಗೆ ಕೂಡ ಗೌರವವನ್ನು ಕೊಡುತ್ತಿದ್ದನು. 'ಓ ನನ್ನ ಸಹೋದರ ಸೂರ್ಯ, ಓ ನನ್ನ ಸಹೋದರಿ ಚಂದ್ರ' ಎಂದು ನಿರ್ಮಲ ಮನಸ್ಸಿನಿಂದ ನುಡಿಯುತ್ತಿದ್ದನು. ಇಂಥ ಅದ್ಭುತ ಸುಂದರ ಪ್ರಕೃತಿಯ ಬಾಂಧವ್ಯಕ್ಕಾಗಿ ಭಗವಂತನನ್ನು ಕೊಂಡಾಡುತ್ತಿದ್ದನು. ಭಗವಂತನಲ್ಲಿ ನೆಲೆಯಿಟ್ಟ ಮನಸ್ಸಿನಿಂದ ನಾವು ಶಾಂತಿಯನ್ನು ಪಡೆದುಕೊಂಡರೆ, ಆಗ ನಮ್ಮ ಸುತ್ತಮುತ್ತಲ ನಿಸರ್ಗದ ಜೊತೆಗೂ ನಾವು ಶಾಂತಿಯಿಂದ ಇರಬಹುದು; ಇದರಿಂದ ನಮ್ಮ ಸುತ್ತಲ ಜನ ಗಳ ನಡುವೆಯೂ ಶಾಂತಿ ಏರ್ಪಡುತ್ತದೆ ಎಂದು ಅವನು ತೋರಿಸಿ ಕೊಟ್ಟನು.

ಈ ಸಂತನು 'ಬಡತನ'ವನ್ನು ತನ್ನ ನಿರಂತರ ಸಂಗಾತಿಯನ್ನಾಗಿ ಮಾಡಿಕೊಂಡಿದ್ದನು. 'ಬಡತನವೆಂಬ ಸ್ತ್ರೀರತ್ನ ನನ್ನ ಸಂಗಾತಿ' ಎಂದು ಹೇಳಿಕೊಳ್ಳುತ್ತಿದ್ದನು. ಕ್ರೈಸ್ತ ಸಾಧುಸಂನ್ಯಾಸಿಗಳಲ್ಲಿ ಈ ಮಹಾನ್



ಪಕ್ಷಿಗಳಿಗೆ ಉಪದೇಶ

ಸಂತನು ಚಿರದೀವಿಗೆಯಂತೆ ಇದ್ದಾನೆ. ತನ್ನ ಅಚ್ಚಳಿಯದ ಪ್ರಭಾವವನ್ನು ಇನ್ನೂ ಅದೃಶ್ಯವಾಗಿ, ನೀರವವಾಗಿ ಬೀರುತ್ತಲೇ ಇದ್ದಾನೆ. ಅವನೇ ಇಟಲಿಯ ಮಹಾನ್ ದಾರ್ಶನಿಕ ಸಂತ, ಕ್ರೈಸ್ತ ಮತ ಸುಧಾರಕ, ಭಗವತ್ಸೇವಾತತ್ಪರ, ಭಗವಂತನಲ್ಲಿ ವಿನಯ ಮತ್ತು ವಿಧೇಯತೆಗಳು ಮೂರ್ತಿವೆತ್ತ ಶಾಂತಸ್ವರೂಪ; ಭಗವಂತನಿಗಾಗಿ ಹಲವಾರು ಸಂಕಟಗಳನ್ನೂ, ಅತೀವ ದೈಹಿಕ ಯಾತನೆಯನ್ನೂ ಅನುಭವಿಸಿದ ಸಹನಾ ಮೂರ್ತಿ; ಇಷ್ಟೆಲ್ಲ ಕಷ್ಟಗಳ ನಡುವೆಯೂ ಭಗವಂತನ ಭಜನಾನಂದದಿಂದ ಹೊರಹೊಮ್ಮಿ ಬರುವ ಭಗವದಾನಂದದ ಆಸ್ವಾದಕ - ಅಸಿಸ್ಸಿಯ ಸಂತ ಫ್ರಾನ್ಸಿಸ್.

## ಬಾಲ್ಯ-ಯೌವನದ ದಿನಗಳು

ಫ್ರಾನ್ಸಿಸ್ ಹುಟ್ಟಿದ್ದು ಇಟಲಿಯ ಅಸಿಸ್ಸಿ ಎಂಬ ನಗರದಲ್ಲಿ, ೧೧೮೧ ರ ಕಡೆಯ ಭಾಗ ಅಥವಾ ೧೧೮೨ರ ಮೊದಲ ಭಾಗದಲ್ಲಿ. ತಂದೆ ಪಿಯೆಟ್ರೋ ಡಿ ಬರ್ನಾರ್‌ಡೋನ್ ಶ್ರೀಮಂತ ಜವಳಿ ವರ್ತಕ. ತಾಯಿ ಪಿಕಾ ಡೆ ಬೌರ್ಲೆಮಂಟ್ ದೈವಭಕ್ತ ಮಹಿಳೆ. ಈ ದಂಪತಿಗಳಿಗೆ ಏಳನೆಯ ಮಗುವಾಗಿ ಫ್ರಾನ್ಸಿಸ್ ಹುಟ್ಟಿದನು. ಫ್ರಾನ್ಸಿಸ್ ಹುಟ್ಟಿದಾಗ ಅವನ ತಂದೆ ವ್ಯಾಪಾರಕ್ಕಾಗಿ ಫ್ರಾನ್ಸ್ ದೇಶಕ್ಕೆ ಹೋಗಿದ್ದನು. ಅಲ್ಲಿ ಅವನು ಬಹಳ ಕಾಲ ಕಳೆದಿರಬೇಕು. ಅಷ್ಟರಲ್ಲಿ ಮಗುವಿಗೆ ನಾಮಕರಣವಾಯಿತು. ಗಿಯೊವನ್ನಿ ಎಂದು ಆಕೆಯ ತಾಯಿ ಅವನಿಗೆ ಹೆಸರಿಟ್ಟಳು. ಕೆಲದಿನಗಳು ಕಳೆದ ನಂತರ ವರ್ತಕನು ಮನೆಗೆ ತಿರುಗಿ ಬಂದನು. ಆಗತಾನೇ ಫ್ರಾನ್ಸ್ ದೇಶದಿಂದ ವಾಪಸ್ಸು ಬಂದಿದ್ದನಷ್ಟೇ. ಅಲ್ಲಿ ಅವನಿಗೆ ಭಾರೀ ವ್ಯಾಪಾರವಾಗಿದ್ದಿರಬೇಕು. ಅಥವಾ ಫ್ರಾನ್ಸ್ ದೇಶದ ಬಗ್ಗೆ, ಅಲ್ಲಿನ ಜನರ ಬಗ್ಗೆ ಮತ್ತು ಸಂಸ್ಕೃತಿಯ ಬಗ್ಗೆ ಬಹು ಮೆಚ್ಚುಗೆ ಮೂಡಿರಬೇಕು. ಅದಕ್ಕೆಂದೇ ಅವನು ತಾನಿಲ್ಲದಾಗ ಹುಟ್ಟಿದ ಮಗುವಿಗೆ ಫ್ರಾನ್ಸ್ ದೇಶದ ಗುರುತಾಗಿ ಫ್ರಾನ್ಸಿಸ್ ಎಂದು ಹೆಸರು ಬದಲಿಸಿದನು. ಕೆಲವು ಲೇಖಕರು ಹೀಗೂ ಹೇಳುತ್ತಾರೆ: ಮಗುವಿನ ತಾಯಿ ಫ್ರಾನ್ಸ್ ದೇಶದಿಂದ ಬಂದವಳು. ಅವಳ ಮೇಲಿನ ಪ್ರೀತಿಯಿಂದಾಗಿ, ತಂದೆಯು ಈ ಹೆಸರನ್ನು ಇಟ್ಟನು ಎಂದು. ಏನೇ ಇರಲಿ, ಶಿಶು ಗಿಯೋವನ್ನಿಯು ಈಗ ಫ್ರಾನ್ಸಿಸ್ ಎಂಬ ಹೊಸ ಹೆಸರನ್ನು ಪಡೆಯಿತು.

ಹುಡುಗನಿದ್ದಾಗ, ಫ್ರಾನ್ಸಿಸ್ ಮೃದುಸ್ವಭಾವದವನಾಗಿದ್ದನು. ಆದರೂ, ಅವನಿಗೆ ಆಟ, ತಮಾಷೆ, ಕೀಟಲೆ ಮಾಡುವುದು - ಇವೆಲ್ಲ ಬಹಳ ಇಷ್ಟ. ಯಾವತ್ತೂ ಏನಾದರೊಂದು ವಿನೋದವನ್ನು ಹುಡುಕಿಕೊಂಡು ಹೋಗುತ್ತಿದ್ದನು. ಊರಿನ ಜನರೆಲ್ಲ ಅವನನ್ನು ಇಷ್ಟಪಡುತ್ತಿದ್ದರು. ಸಂತ ಜಾರ್ಜ್ ಚರ್ಚ್ ಶಾಲೆಯಲ್ಲಿ ಅವನು ಲ್ಯಾಟಿನ್ ಭಾಷೆಯನ್ನು ಓದಲು ಮತ್ತು ಬರೆಯಲು ಕಲಿತನು. ಅವನ ತಂದೆ ಫ್ರಾನ್ಸ್ ದೇಶಕ್ಕೆ ಅಡಿಗಡಿಗೆ ಹೋಗುತ್ತಿದುದರಿಂದ, ಅವನಿಂದ ಫ್ರೆಂಚ್ ಭಾಷೆಯನ್ನೂ ಕಲಿತನು.

ಯೌವನದ ಅಡೆತಡೆಯಿಲ್ಲದ ಹುಚ್ಚು ಪ್ರವಾಹದಲ್ಲಿ ಫ್ರಾನ್ಸಿಸ್ ಕೊಚ್ಚಿಹೋದನು. ಧನಿಕ ವರ್ತಕನ ಮಗನಾದ್ದರಿಂದ ಬಹಳ ವಿಷಯ ಲಂಪಟ ಜೀವನವನ್ನು ನಡೆಸುತ್ತಿದ್ದನು. ಆಗಿನ ಕಾಲದಲ್ಲಿ ಧನಿಕ ಯುವಕರು ಸೈನ್ಯವನ್ನು ಸೇರಲು ಇಷ್ಟಪಡುತ್ತಿದ್ದರು. ವೀರಯೋಧರಾಗಿ ಹೆಸರು ಕೀರ್ತಿಗಳನ್ನು ಪಡೆದುಕೊಳ್ಳಬೇಕೆಂದು ಹಾತೊರೆಯುತ್ತಿದ್ದರು. ಅವರಿಗೆ ಜೀವನದ ಉದ್ದೇಶವೆಂಬುದು ಅದೇ ಆಗಿತ್ತು. ಅಂತಹ ಯುವಕರ ಗುಂಪಿಗೆ ಫ್ರಾನ್ಸಿಸ್ ಕೂಡ ಸೇರಿಕೊಂಡನು. ವೀರಯೋಧನ ವೈಭವಯುತ ರಮಣೀಯ ಬಾಳುವೆಯ ಕನಸು ಕಾಣತೊಡಗಿದನು. ಆಗಿನ ಕಾಲದಲ್ಲಿ ಇಟಲಿಯ ನಗರಗಳ ನಡುವೆ ಕಲಹಗಳು ನಡೆಯುತ್ತಿದ್ದವು. ಅಸಿಸ್ಸಿಯ ಜನರು ಪೆರುಗಿಯಾ ಎಂಬ ಊರಿನ ಜನರ ವಿರುದ್ಧ ೧೨೦೧ರಲ್ಲಿ ಯುದ್ಧ ಮಾಡಲು ಹೋದರು. ಆ ಸೈನ್ಯಕ್ಕೆ ಫ್ರಾನ್ಸಿಸ್ ಕೂಡ ಸೇರಿಕೊಂಡನು. ಯುದ್ಧದಲ್ಲಿ ಅಸಿಸ್ಸಿಯ ಸೈನ್ಯ ಸೋತುಹೋಯಿತು. ಫ್ರಾನ್ಸಿಸ್ ಸೆರೆಯಾಳಾಗಿ ಸಿಕ್ಕಿಬಿದ್ದನು. ಒಂದು ವರ್ಷ ಸೆರೆಮನೆಯಲ್ಲಿ ಕಳೆದನು. ಆದರೆ ಅದನ್ನೇನೂ ಅವನು ಮನಸ್ಸಿಗೆ ಹಚ್ಚಿಕೊಂಡಿರಲಿಲ್ಲ. ಸೆರೆಮನೆಯ ದಿನಗಳನ್ನು ಆನಂದವಾಗಿಯೇ ಕಳೆದನು. ಸೆರೆಸಿಕ್ಕ ಸೈನಿಕರ ನಡುವೆ ಅವನ ಹೆಸರು ಜನಜನಿತವಾಯಿತು. ಕಾರಾಗಾರದ ಈ ಅನುಭವವು ಮುಂದಿನ ದಿನಗಳಲ್ಲಿ ಅವನಲ್ಲಿ ಉಂಟಾದ ಆಧ್ಯಾತ್ಮಿಕ ವಿಕಸನದ ಬೇರಿನಂತೆ ಇದೆ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

೧೨೦೩ರಲ್ಲಿ ಮರಳಿ ಮನೆಗೆ ಬಂದ ಫ್ರಾನ್ಸಿಸ್, ತನ್ನ ಮೊದಲಿನ ಜೀವನಶೈಲಿಯನ್ನೇ ಮುಂದುವರೆಸಿದನು. ೧೨೦೪ರಲ್ಲಿ ಕೆಲಕಾಲ ಅನಾರೋಗ್ಯದಿಂದ ನರಳಿದನು. ಇದು ಅವನಲ್ಲಿ ಆಧ್ಯಾತ್ಮಿಕ ತುಮುಲವನ್ನು ಉಂಟುಮಾಡಿತು ಎಂದು ಹೇಳುತ್ತಾರೆ. ಮತ್ತೆ ೧೨೦೫ರ ಕಡೆಯ ಭಾಗದಲ್ಲಿ ಮತ್ತೊಂದು ಯುದ್ಧಕ್ಕೆ ಸೇರಲು ಫ್ರಾನ್ಸಿಸ್ ಹೊರಟನು. ತನ್ನ ವಿರುದ್ಧ ಬಂಡಾಯ ಹೂಡಿದ್ದ ಅಪುಲಿಯಾದ ಎರಡನೆಯ ಫ್ರೆಡ್ರಿಕ್ ರಾಜನ ವಿರುದ್ಧ, ಕ್ಯಾಥೊಲಿಕ್ ಮಠದ ಸರ್ವಶ್ರೇಷ್ಠ ಮಠಾ

ಧ್ಯಕ್ಷನಾದ ಪೋಪ್ ಒಂದು ಸೈನ್ಯವನ್ನು ಕಳಿಸಿದನು. ಕೌಂಟ್ ಗೆಂಟೈಲ್ ಎಂಬ ಸೈನ್ಯಾಧಿಕಾರಿಯ ನೇತೃತ್ವದಲ್ಲಿ ಸೈನ್ಯ ಹೊರಟಿತ್ತು. ಅದಕ್ಕೆ ಫ್ರಾನ್ಸಿಸ್ ಕೂಡ ಸೇರಿಕೊಂಡನು. ಆದರೆ ಸ್ವಲ್ಪ ದಾರಿಯನ್ನು ಕ್ರಮಿಸು ವಷ್ಟರಲ್ಲಿ ಸ್ಪೋಲೆಟೋ ಎಂಬಲ್ಲಿ ಅವನಿಗೆ ಒಂದು ದಿವ್ಯದರ್ಶನ ವಾಯಿತು. ಒಡನೆ ಅಸಿಸ್ಸಿಗೆ ವಾಪಸ್ಸು ಹೋಗುವಂತೆಯೂ, ಮನುಷ್ಯ ಮಾತ್ರನನ್ನು ಸೇವೆಮಾಡುವ ಬದಲು ಭಗವಂತನ ಸೇವೆ ಮಾಡು ವಂತೆಯೂ ಆ ದರ್ಶನದಲ್ಲಿ ಅವನಿಗೆ ಆದೇಶವಾಯಿತು. ''ಯುದ್ಧ ನಾಯಕನಾಗುವ ಬದಲು ಇನ್ನೊಂದು ಬಗೆಯ ನಾಯಕನಾಗುವ ಅವಕಾಶ ನಿನಗೆ ಪ್ರಾಪ್ತವಾಗಿದೆ. ಅದಕ್ಕಾಗಿ ಮುಂದಿನ ದಿನಗಳಲ್ಲಿ ಒಂದು ದಿವ್ಯಕರೆಯು ನಿನ್ನನ್ನು ಆಹ್ವಾನಿಸುವುದು. ಅದಕ್ಕಾಗಿ ನಿರೀಕ್ಷೆ ಮಾಡು'' ಎಂದು ಆ ದಿವ್ಯವಾಣಿಯು ಫ್ರಾನ್ಸಿಸ್‌ಗೆ ಆಜ್ಞೆಮಾಡಿತು. ಇದಕ್ಕೆ ಮನ್ನಣೆಕೊಟ್ಟ ಫ್ರಾನ್ಸಿಸ್, ಮನೆಗೆ ವಾಪಸ್ಸು ಬಂದನು. ಏಕಾಂತ ದಲ್ಲಿ ಕಾಲ ಕಳೆಯುತ್ತ, ಭಗವಂತನ ಪ್ರಾರ್ಥನೆಯಲ್ಲಿ ಸಂಪೂರ್ಣ ಮಗ್ನನಾದನು. ಆ ಮೂಲಕ ಭಗವಂತನ ಇಚ್ಛೆಯನ್ನು ಅರಿತುಕೊಳ್ಳುವ ಪ್ರಯತ್ನ ಮಾಡತೊಡಗಿದನು. ಈ ಸಂದರ್ಭದಲ್ಲಿ ಭಗವಾನ್ ಏಸು ಕ್ರಿಸ್ತನು ಶಿಲುಬೆಯ ಮೇಲೆ ನರಳುತ್ತಿದ್ದ ಅಪೂರ್ವ ದರ್ಶನವನ್ನು ಅವನು ಪಡೆದುಕೊಂಡನು.

ಇದೇ ಸಂದರ್ಭದಲ್ಲಿ ಫ್ರಾನ್ಸಿಸ್‌ನ ವ್ಯಕ್ತಿತ್ವದ ಇನ್ನೊಂದು ಮೇರು ಗುಣವು ಬೆಳಕಿಗೆ ಬರುತ್ತ ಹೋಯಿತು. ಅದೇ ಬಡವರ ಮೇಲೆ ಅವನಿಗಿದ್ದ ಅಸಾಧಾರಣ ಅನುಕಂಪೆ. ಅಸಿಸ್ಸಿ ನಗರದ ಬಡ ಪಾದ್ರಿ ಗಳು ಮತ್ತು ಸಂತ್ರಸ್ತರಿಗೆ ತನ್ನ ಕೈಲಾದಷ್ಟು ಸಹಾಯವನ್ನು ಅವನು ಮಾಡ ಲಾರಂಭಿಸಿದನು. ನಿರ್ಗತಿಕರ ಜೊತೆಗೆ ಬೆರೆಯಲಾರಂಭಿಸಿ ದನು. ಕೆಲಕಾಲದ ನಂತರ ಫ್ರಾನ್ಸಿಸ್ ರೋಮ್ ಮಹಾನಗರಕ್ಕೆ ತೀರ್ಥ ಯಾತ್ರೆಗೆ ಹೋದನು. ಅಲ್ಲಿ ಏಸುಕ್ರಿಸ್ತನ ಸಂದೇಶವಾಹಕನಾಗಿದ್ದ ಸಂತ ಪೀಟರನ ಸಮಾಧಿ ಇದೆ. ರೋಮ್ ನಗರದಲ್ಲಿ ಇದ್ದಾಗ, ಒಂದು ಇಡೀ ದಿನ ಬಡವನ ಹಾಗೆ ಚಿಂದಿ ಬಟ್ಟೆಯನ್ನು ಉಟ್ಟು ಕೊಂಡನು. ಸಂತ ಪೀಟರನ ಸಮಾಧಿಸ್ಥಳದ ಹತ್ತಿರ ಭಿಕ್ಷೆ ಬೇಡುತ್ತಿದ್ದ ಭಿಕ್ಷುಕರ ನಡುವೆ ನಿಂತು, ತಾನೂ ಭಿಕ್ಷೆ ಬೇಡಿದನು. ಮುಂದೊಂದು ದಿನ ಕುಷ್ಠರೋಗಿಯೊಬ್ಬನಿಗೆ ಭಿಕ್ಷೆ ಕೊಟ್ಟದ್ದಲ್ಲದೆ, ಅವನನ್ನು ತಬ್ಬಿ ಕೊಂಡನು. ಈ ಬಗೆಯ ಹಲವು ಘಟನೆಗಳನ್ನು ಅವನ ಜೀವನ ಚರಿತ್ರೆಕಾರರು ದಾಖಲಿಸಿದ್ದಾರೆ.

ಇವೆಲ್ಲ ಘಟನೆಗಳ ನಡುವಿನ ರತ್ನಪ್ರಾಯವಾದ ಒಂದು ಘಟನೆ ಹೀಗಿದೆ: ಈ ಘಟನೆಯು ಫ್ರಾನ್ಸಿಸ್‌ನ ಜೀವನದಲ್ಲಿ ಮಹತ್ತರ ಆಧ್ಯಾತ್ಮಿಕ ಪರಿವರ್ತನೆಯನ್ನು ಉಂಟುಮಾಡಿತು. ತನ್ನ ಏಕಾಂತ ಸಾಧನೆಯ ಸಂದರ್ಭದಲ್ಲಿ ಫ್ರಾನ್ಸಿಸ್ ಅಸಿಸ್ಸಿಯ ಹೊರವಲಯದಲ್ಲಿ ಪಾಳುಬಿದ್ದಿದ್ದ ಒಂದು ಚರ್ಚ್‌ಗೆ ಹೋಗಿ ಪ್ರಾರ್ಥನೆ ಮಾಡುತ್ತಿದ್ದನು. ಅದರ ಹೆಸರು ಸ್ಯಾನ್ ಡಮಿಯಾನೋ ಪ್ರಾರ್ಥನಾಮಂದಿರ ಎಂದು. ಆ ಸಂದರ್ಭದಲ್ಲಿ ವೇದಿಕೆಯ ಮೇಲಿನ ಶಿಲುಬೆಯ ಆಕೃ ತಿಯು ಅವನಿಗೆ ಈ ಆದೇಶವನ್ನು ನೀಡಿತು: ''ಹೋಗು, ಫ್ರಾನ್ಸಿಸ್, ನನ್ನ ಮನೆಯ ನವೀಕರಣ ಮಾಡು. ನೀನೇ ನೋಡುತ್ತಿದ್ದೀಯಲ್ಲ, ಇದು ಎಷ್ಟು ಜೀರ್ಣಾವಸ್ಥೆಯಲ್ಲಿದೆ ಎಂಬುದನ್ನು.' ಇದನ್ನು ಫ್ರಾನ್ಸಿಸ್ ಅಕ್ಷರಶಃ ಅನುಸರಿಸಿದ. ಮನೆಗೆ ಓಡಿಹೋಗಿ, ತನ್ನ



ಫ್ರಾನ್ಸಿಸ್ ವಸ್ತ್ರವನ್ನೆಲ್ಲ ಬಿಚ್ಚಿ ತಂದೆಗಿತ್ತ

ತಂದೆಯ ಅಂಗಡಿಯಿಂದ ಬೆಲೆಬಾಳುವ ಬಟ್ಟೆಗಳನ್ನು ಎತ್ತಿಕೊಂಡು ಬಂದ. ಅವನ್ನು ಕುದುರೆಯಲ್ಲಿ ಹೊತ್ತುಕೊಂಡು, ಫೊಲಿಗೊ ಎಂಬ ಹತ್ತಿರದ ನಗರಕ್ಕೆ ಹೋದ. ಅಲ್ಲಿ ಬಟ್ಟೆಯನ್ನು ಮಾರಿದ; ಅಲ್ಲದೆ ಕುದುರೆಯನ್ನೂ ಮಾರಿಬಿಟ್ಟ. ಅದರಿಂದ ಬಂದ ಹಣವನ್ನು ಸ್ಯಾನ್ ಡಮಿಯಾನೋ ಪ್ರಾರ್ಥನಾ ಮಂದಿರದ ಪಾದ್ರಿಗೆ ನೀಡಲು ಹೋದ. ಆದರೆ ಆ ಪಾದ್ರಿಯು ಆ ಹಣವನ್ನು ಸ್ವೀಕರಿಸಲು ನಿರಾ ಕರಿಸಿದ. ಇದರಿಂದ ನಿರಾಶನಾದ ಫ್ರಾನ್ಸಿಸ್ ಆ ಹಣವನ್ನು ಕಿಟಿಕಿಯ ಹೊರಗಡೆ ಎಸೆದುಬಿಟ್ಟನಂತೆ. ಇದರಿಂದ ಅವನ ತಂದೆಗೆ ಬಹಳ ಕೋಪ ಬಂತು. ಮಗನನ್ನು ಮನೆಯಲ್ಲಿಯೇ ಕೂಡಿಹಾಕಿದ. ಅಷ್ಟೇ ಅಲ್ಲ, ಸ್ವಂತ ಮಗನ ವಿರುದ್ಧವೇ ಊರಿನ ಅಧಿಕಾರಿಗಳಲ್ಲಿ ದೂರನ್ನು ದಾಖಲಿಸಿದ. ಅಧಿಕಾರಿಗಳು ಫ್ರಾನ್ಸಿಸ್‌ಗೆ ಬುಲಾವು ಕಳಿಸಿದರು. ಆದರೆ ಅವನು ಹಾಜರಾಗಲು ನಿರಾಕರಿಸಿದ. ಇದರಿಂದ ನೊಂದ ಫ್ರಾನ್ಸಿಸ್‌ನ ತಂದೆ, ಊರಿನ ಬಿಷಪ್‌ನ ಹತ್ತಿರವೂ ದೂರನ್ನು ಕೊಂಡೊಯ್ದ. ಅಲ್ಲಿಗೆ ಹಾಜರಾದ ಫ್ರಾನ್ಸಿಸ್ ತನ್ನ ವಿರುದ್ಧ ದೋಷಾ ರೋಪಣೆ ಮಾಡುವ ಮುಂಚೆಯೇ, ಒಂದು ಮಾತನ್ನೂ ಆಡದೆ, ತನ್ನೆಲ್ಲ ಬಟ್ಟೆಗಳನ್ನು ಬಿಚ್ಚಿ ತಂದೆಗೆ ಕೊಟ್ಟುಬಿಟ್ಟ. ಪೂರ್ತಿ ನಗ್ನನಾಗಿ ನಿಂತುಬಿಟ್ಟ. ನಂತರವಷ್ಟೇ ಬಾಯಿಬಿಟ್ಟ : ''ಇದುವರೆಗೆ ನಿನ್ನನ್ನು ಈ ಭೂಮಿಯ ತಂದೆಯೆಂದು ಕರೆದು ಗೌರವಿಸುತ್ತಿದ್ದೆ. ಆದರೆ ಇನ್ನು ಮೇಲೆ ನಾನು ನಿಜವಾದ ಸತ್ಯವನ್ನೇ ನುಡಿಯುತ್ತೇನೆ: ಸ್ವರ್ಗದಲ್ಲಿರುವ ಪಿತನೇ ನನ್ನ ನಿಜವಾದ ತಂದೆ.'' ಇದನ್ನು ಕೇಳಿ ಬಿಷಪ್ ಆಶ್ಚರ್ಯ ಗೊಂಡನು. ಒಡನೆ ಅವನಿಗೆ ನಿಲುವಂಗಿಯೊಂದನ್ನು ನೀಡಿದನು. ಅದನ್ನು ಹೊದ್ದುಕೊಂಡು, ಊರಿನ ಪಕ್ಕದಲ್ಲಿಯೇ ಇರುವ ಸುಬ ಸಿಯೊ ಪರ್ವತದ ಅರಣ್ಯಪ್ರದೇಶಕ್ಕೆ ನಡೆದೇ ಬಿಟ್ಟ. ಇದು ನಡೆದಿದ್ದು ೧೨೦೬ರಲ್ಲಿ. ಆಗ ಫ್ರಾನ್ಸಿಸ್‌ಗೆ ಕೇವಲ ೨೫ ವರ್ಷ ವಯಸ್ಸು.

ಅಲ್ಲಿಂದ ಹಿಡಿದು ಮುಂದೆ ಇಪ್ಪತ್ತು ವರ್ಷಗಳ ಕಾಲ ಅವನು ತನ್ನ ನಿಜವಾದ ದೊರೆಯಾದ ಏಸುಕ್ರಿಸ್ತನ ವಿಧೇಯ ಅಧಿಕಾರಿಯಾಗಿ ಸಾರ್ಥಕ ಜೀವನವನ್ನು ನಡೆಸಿದ್ದನ್ನು ನೋಡುತ್ತೇವೆ.

ಫ್ರಾನ್ಸಿಸ್ ತನ್ನೆಲ್ಲ ಪ್ರಾಪಂಚಿಕ ಸಂಬಂಧಗಳನ್ನೂ ಕಡಿದು ಕೊಂಡನು. ಪೂರ್ಣ ಬಡತನದ ಬಾಳನ್ನು ತಾನಾಗಿಯೇ ಅಪ್ಪಿ ಕೊಂಡನು. ಅವನು ಸಾನ್ ಡಮಿಯಾನೋ ಚರ್ಚ್ ಕಟ್ಟಡದ ನವೀ ಕರಣವನ್ನು ಕೈಗೊಂಡನು. ಇದಲ್ಲದೆ ಪ್ರವಾದಿ ಸಂತ ಪೀಟರನಿಗೆ ಮುಡಿಪಾಗಿದ್ದ ಒಂದು ಪ್ರಾರ್ಥನಾಮಂದಿರದ ಪುನರುದ್ಧಾರ ಕಾರ್ಯವನ್ನೂ ಕೈಗೆತ್ತಿಕೊಂಡನು. ಅಸಿಸ್ಸಿಗಿಂತ ಕೆಳಗಿನ ವಲಯ ದಲ್ಲಿರುವ ಪೋರ್ಟಿಯಯುನ್‌ಕುಲ ಎಂಬ ಸಮತಟ್ಟು ಪ್ರದೇಶ ದಲ್ಲಿ ರುವ ಸಂತ ಮೇರಿ ಆಫ್ ಎಂಜೆಲ್ಸ್ ಚರ್ಚ್‌ನ ಪುನರುಜ್ಜೀವನ ಕಾರ್ಯವನ್ನೂ ನಡೆಸಿದನು. ಇದಲ್ಲದೆ ತಪಸ್ವಿಯ ನಿಲುವಂಗಿ ಯನ್ನು ಧರಿಸಿ, ಎರಡು ವರ್ಷಗಳಿಗೂ ಹೆಚ್ಚುಕಾಲ ಕುಷ್ಠರೋಗಿಗಳ ಸೇವೆಯನ್ನು ನಿಸ್ಪೃಹವಾಗಿ ಮಾಡಿದನು.

ಅನಂತರ, ೧೨೦೮ರ ಫೆಬ್ರವರಿ ೨೪ನೆಯ ತಾರೀಖು ಸಂತ ಮಥಿಯಾಸ್‌ನ ಪುಣ್ಯಾರಾಧನೆಯಂದು ಪ್ರವಚನಕಾರರ ಉಪದೇಶ ವಾಣಿಯನ್ನು ಆಲಿಸಿದನು. ಬೈಬಲ್ಲಿನ 'ಮಾಥ್ಯೂ ಬರೆದ ಸುವಾರ್ತೆ' ಅಧ್ಯಾಯದಲ್ಲಿ ಬರುವ ಒಂದು ಪ್ರಸಂಗ (೧೦ : ೭, ೯–೧೧) ಅವನ ಮನಸ್ಸಿನ ಮೇಲೆ ಆಳವಾದ ಪ್ರಭಾವ ಬೀರಿತು. ಇದರಲ್ಲಿ ಪ್ರಭು ಏಸುಕ್ರಿಸ್ತನು ತನ್ನ ಶಿಷ್ಯಂದಿರಿಗೆ ಹೀಗೆ ಹೇಳು ತ್ತಿದ್ದಾನೆ: ''ನೀವೆಲ್ಲರೂ ಎಲ್ಲೆಡೆ ಪ್ರಯಾಣ ಮಾಡಿ. ಪ್ರಯಾಣ ಮಾಡುವ ಸಮಯದಲ್ಲಿ 'ಸಾಮ್ರಾಜ್ಯವು ನಿಮ್ಮ ಕೈಯಲ್ಲಿದೆ' ಎಂಬ ಸಂದೇಶವನ್ನು ಎಲ್ಲ ಕಡೆ ಪ್ರಸಾರ ಮಾಡಿ... ಯಾವ ಚಿನ್ನದ ಪದಾರ್ಥವನ್ನೂ ಕೊಂಡೊಯ್ಯದಿರಿ; ಯಾವ ಬೆಳ್ಳಿಯ ಪದಾರ್ಥ ವನ್ನೂ ಕೊಂಡೊಯ್ಯದಿರಿ; ಯಾವ ಹಣವನ್ನೂ ಕೊಂಡೊಯ್ಯದಿರಿ. ನಿಮ್ಮ ಜೊತೆಗೆ ಪ್ರಯಾಣದ ಚೀಲವನ್ನೂ ಕೊಂಡೊಯ್ಯದಿರಿ, ಎರಡು ನಿಲುವಂಗಿಗಳೂ ಬೇಡ, ಚಪ್ಪಲಿಗಳ ಅವಶ್ಯಕತೆಯೂ ಇಲ್ಲ, ಒಂದು ಕೋಲನ್ನೂ ಇಟ್ಟುಕೊಳ್ಳದಿರಿ. ಏಕೆಂದರೆ ಕೆಲಸಗಾರನು ಮಾತ್ರವೇ ಆಹಾರವನ್ನು ಪಡೆದುಕೊಳ್ಳುವು ದಕ್ಕೆ ಅರ್ಹನಾಗುತ್ತಾನೆ. ನೀವು ಯಾವುದಾದರೂ ನಗರದ ಅಥವಾ ಬಂಗಲೆಯ ಒಳಹೊಕ್ಕರೆ, ಅಲ್ಲಿ ಯೋಗ್ಯನಾದವನನ್ನು ಕಂಡು ಹಿಡಿ ಯಿರಿ. ಅಲ್ಲಿಂದ ತೆರಳುವ ತನಕವೂ ಅವನ ಜೊತೆ ವಾಸಮಾಡಿರಿ. ''

ಸಂತ ಫ್ರಾನ್ಸಿಸ್‌ನ ಜೀವನಚರಿತ್ರಕಾರನಾದ ಸೆಲೆನೋದ ಥಾಮಸ್‌ನ ಪ್ರಕಾರ ಇದು ಫ್ರಾನ್ಸಿಸ್‌ನ ಜೀವನದ ನಿರ್ಧಾರಕ ಸಮಯವಾಗಿ ಪರಿಣಮಿಸಿತು. ಮೇಲಿನ ಕ್ರಿಸ್ತವಾಣಿಯನ್ನು ಕೇಳಿದ ಫ್ರಾನ್ಸಿಸ್ ಹೀಗೆ ಉದ್ಘೋಷಿಸಿದನು: ''ನಾನು ಇಷ್ಟಪಡುವುದು ಇದನ್ನೇ. ಈ ಉಪದೇಶವನ್ನೇ ನಾನು ಹುಡುಕುತ್ತಿದ್ದುದು. ನನ್ನ ಹೃದಯಾಂತರಾಳದಲ್ಲಿ ನಾನು ಮಾಡಬೇಕೆಂದಿದ್ದುದು ಇದನ್ನೇ.'' ಒಡನೆ ಫ್ರಾನ್ಸಿಸ್ ತನ್ನ ಬೂಟುಗಳನ್ನು ಕಳಚಿ ಕಿತ್ತೆಸೆದನು; ತನ್ನ ಕೈಲ್ಲಿದ್ದ ದಂಡವನ್ನೂ ಎಸೆದುಬಿಟ್ಟನು; ಒರಟೊರಟಾದ ನಿಲುವಂಗಿ ಯನ್ನು ಹಾಕಿಕೊಂಡನು. ಏಸುಕ್ರಿಸ್ತನ ಉಪದೇಶವನ್ನು ಅಕ್ಷರಶಃ ಪಾಲಿಸುತ್ತ, ಅಸಿಸ್ಸಿಗೆ ಸಮೀಪದ ಊರುಗಳಿಗೆ ಹೋಗುತ್ತ ಭಗವಂತನ ಅಪಾರ ಕರುಣೆಯನ್ನೂ, ಪಾಪಕ್ಕೆ ಮಾಡಿಕೊಳ್ಳಬೇಕಾದ ಪಶ್ಚಾತ್ತಾಪವನ್ನೂ ಸಾಮಾನ್ಯ ಜನರಿಗೆ ಬೋಧಿಸಲು ಆರಂಭಿಸಿದನು.

### ಸಂನ್ಯಾಸಿ ಸಂಪ್ರದಾಯ ಸ್ಥಾಪಕನಾಗಿ ಫ್ರಾನ್ಸಿಸ್

ಈ ರೀತಿ ನಿಶ್ಚಯವನ್ನು ಮಾಡಿದ ಫ್ರಾನ್ಸಿಸ್ ಅಸಿಸ್ಸಿಯು ಸುತ್ತ ಮುತ್ತಲ ಪ್ರದೇಶಗಳಲ್ಲಿ ತನ್ನ ಪ್ರವಚನಕಾರ್ಯವನ್ನು ಆರಂಭಿಸಿ ದನು. ಕೆಲವೇ ಕಾಲದಲ್ಲಿ ಬಹಳಷ್ಟು ಅನುಯಾಯಿಗಳನ್ನು ಆಕರ್ಷಿಸಿ ದನು. ೧೨೦೯ರಲ್ಲಿ ಅವನು ತನ್ನ ಅನುಯಾಯಿಗಳಿಗೆ ಒಂದು ನಿಯಮಾಳಿಯನ್ನು ರಚಿಸಿದನು. ಇದನ್ನು 'ಮೂಲ ನಿಯಮ' (Primitive Rule) ಎಂದು ಕರೆಯಲಾಗುತ್ತದೆ. ಈ ನಿಯಮಾ ವಳಿಯಲ್ಲಿ ಬೈಬಲ್ಲಿನಿಂದ ಉದ್ಧೃತವಾದ ಹಲವಾರು ಉಕ್ತಿಗಳು ಇದ್ದವು. ಒಟ್ಟಿನಲ್ಲಿ ಈ ನಿಯಮಾವಳಿಯ ಸಾರಾಂಶವೆಂದರೆ, 'ನಮ್ಮ ಪ್ರಭುವಾದ ಏಸುಕ್ರಿಸ್ತನ ಬೋಧನೆಯಂತೆ ನಡೆದುಕೊಳ್ಳುವುದು ಮತ್ತು ಅವನು ತೋರಿಸಿಕೊಟ್ಟ ದಾರಿಯಲ್ಲಿ ನಡೆಯುವುದು' – ಇದೇ ಆಗಿತ್ತು. ಸ್ವಲ್ಪ ಸಮಯದ ನಂತರ, ಫ್ರಾನ್ಸಿಸ್ ತನ್ನ ೧೨ ಅನು ಯಾಯಿಗಳೊಡನೆ ರೋಮಿಗೆ ಹೋದನು. ತನ್ನ ಈ ಪಂಗಡಕ್ಕೆ ಕ್ಯಾಥೊಲಿಕ್ ಚರ್ಚ್‌ನ ಸರ್ವೋಚ್ಚ ಪೀಠಾಧಿಪತಿಯಾಗಿದ್ದ ಪೋಪ್ ಎರಡನೆಯ ಇನ್ನೊಸೆಂಟ್ ಗುರುಗಳ ಅಧಿಕೃತ ಮಾನ್ಯತೆ ಪಡೆದು ಕೊಳ್ಳುವುದು ಈ ತೀರ್ಥಯಾತ್ರೆಯ ಉದ್ದೇಶವಾಗಿತ್ತು. ಕ್ಯಾಥೊಲಿಕ್ ಮತದ ಯಾವ ತರಬೇತಿ ಇಲ್ಲದಿದ್ದರೂ, ತಾನೇ ತಾನಾಗಿ ಭಗವಂತನ ಆದೇಶದಂತೆ ಅವನು ಈ ಸಂನ್ಯಾಸಿಗಳ ಪಂಗಡವನ್ನು ರೂಪಿಸಿದ್ದನು. ಇದಕ್ಕೆ ಅಧಿಕಾರಪೀಠದಿಂದ ತಕ್ಕ ಮಾನ್ಯತೆಯನ್ನು ಪಡೆದುಕೊಳ್ಳು ವುದು ಆವಶ್ಯಕವಾಗಿತ್ತು. ಇಲ್ಲದಿದ್ದರೆ ಆ ಸಂನ್ಯಾಸಿ ಪಂಗಡವನ್ನು ಕ್ಯಾಥೊಲಿಕ್ ಮತವು ಬಹಿಷ್ಕರಿಸುವ ಅಪಾಯವಿತ್ತು. ಪೋಪ್ ಗುರುವು ಮೌಖಿಕವಾಗಿ ಈ ಪಂಗಡದ ಅಸ್ತಿತ್ವವನ್ನು ಮಾನ್ಯಮಾಡಿದ ನಾದರೂ, ಲಿಖಿತವಾಗಿ ದಾಖಲೆಪತ್ರವನ್ನು ನೀಡಲು ನಿರಾಕರಿಸಿ ದನು. ಈ ಘಟನೆಯು ನಡೆದದ್ದು ಏಪ್ರಿಲ್ ೧೬, ೧೨೧೦ರಂದು. ಈ ದಿನವನ್ನು ಫ್ರಾನ್‌ಸಿಸ್ಕನ್ ಸಂನ್ಯಾಸ ಪಂಗಡದ ಅಧಿಕೃತ ಸ್ಥಾಪನಾ ದಿವಸವಾಗಿ ಆಚರಿಸಲಾಗುತ್ತದೆ. ಈ ನೂತನ ಪಂಗಡದ ಸದಸ್ಯರನ್ನು 'ಕೆಳಮಟ್ಟದ ಸಹೋದರರು' (Friars Minor) ಕರೆಯುವುದು ವಾಡಿಕೆಯಾಯಿತು. ಅವರಿಗೆ ಯಾವ ಪ್ರಾಪಂಚಿಕ ಸ್ವತ್ತೂ ಇರಲಿಲ್ಲ, ಅವರು 'ಬೀದಿ ಬೋಧಕರು.' ಬೀದಿಬೀದಿಯಲ್ಲಿ ಸುತ್ತುತ್ತ ಅವರು ಜನಗಳಿಗೆ ಬೋಧನೆ ಮಾಡುತ್ತಿದ್ದರು. ಹೀಗಿದ್ದಾಗ್ಯೂ ಪೋರ್ಟಿಯುನ್ ಕುಲ ಎಂಬ ಸ್ಥಳವನ್ನು ಅವರು ತಮ್ಮ ಕೇಂದ್ರವನ್ನಾಗಿ ಮಾಡಿಕೊಂಡಿ ದ್ದರು. ನಿಧಾನವಾಗಿ ಅವರು ಇಡೀ ಇಟಲಿ ದೇಶದಲ್ಲಿ ತಮ್ಮ ಪ್ರಭಾವ ವನ್ನು ಬೀರಿದರು.

ಏಸುಕ್ರಿಸ್ತನ ಜೀವನ ಮತ್ತು ಅವನ ದಿವ್ಯಕಾರ್ಯವನ್ನು ಏಸು ಕ್ರಿಸ್ತನು ತೋರಿದ ದಾರಿಯಲ್ಲಿಯೇ ಚಾಚೂತಪ್ಪದೆ ಅನುಸರಿಸಲು ಅತ್ಯಂತ ಗಂಭೀರವಾಗಿ ನಿಶ್ಚಯವನ್ನು ಮಾಡಿ, ಅದನ್ನು ಅಕ್ಷರಶಃ ಪರಿಪಾಲಿಸಿದವನಲ್ಲಿ ಫ್ರಾನ್ಸಿಸ್ ಅಗ್ರಗಣ್ಯನು. ಈ ದಿಶೆಯಲ್ಲಿ ಅವನು ತನ್ನದೇ ಆದ ಸಂನ್ಯಾಸೀ ಪಂಗಡವನ್ನು ಆರಂಭ ಮಾಡಿದ್ದು ಅವನ ಜೀವನದ ಬಹು ಪ್ರಮುಖ ಮೈಲುಗಲ್ಲಾಗಿದೆ.

*(ಮುಂದಿನ ಸಂಚಿಕೆಗೆ)*

# ದೇವರಿಗೆ ಪತ್ರ ಬರೆದ ಭಕ್ತ

**ಕಥೆ:** ಆರ್.ವಿ. **ಚಿತ್ರ:** ಶಂಕರ್

1 ನರಸಿಂಹ ಮೆಹತಾ (ಅಥವಾ ನರಸೀ ಮೆಹತಾ) ಶ್ರೀಕೃಷ್ಣನ ದೊಡ್ಡ ಭಕ್ತನಾಗಿದ್ದ. ಅವನ ಪತ್ನಿ ಮನೇಕಾ ಗೌರಿ. ಅವರಿಗೊಬ್ಬಳು ಮಗಳಿದ್ದಳು, ಅವಳೇ ಕುನ್ವರ್ ಬಾಯಿ. ಮೂವರೂ ಶ್ರೀಕೃಷ್ಣನ ಪರಮ ಭಕ್ತರಾಗಿದ್ದರು.

2




3




4



**5** ಶ್ರೀಮಂತ ಜಮೀನ್ದಾರನೇ ಎಲ್ಲ ಖರ್ಚನ್ನೂ ವಹಿಸಿದ್ದರಿಂದ ವಿವಾಹವು ಸಂಭ್ರಮದಿಂದ ನೆರವೇರಿತು. ಆದರೆ ಜಮೀನ್ದಾರನ ಪತ್ನಿ ರಾಣಿಗೆ ತನ್ನ ಪತಿಯೇ ಎಲ್ಲ ಖರ್ಚನ್ನೂ ವಹಿಸಿದ ವಿಷಯ ತಿಳಿದಾಗ ಅಸಾಧ್ಯ ಕೋಪ ಬಂತು.

**6**




ರಾಣಿಯ ಕೋಪದ ಮುಂದೆ ಜಮೀನ್ದಾರ ಅಸಹಾಯಕನಾಗಿದ್ದ.

**7** ಕೆಲವು ತಿಂಗಳ ನಂತರ...




ಅಂದು ರಾತ್ರಿ ಕನಸಿನಲ್ಲಿ...




**8** ಕುನ್ವರ್ ಬಾಯಿಯನ್ನು ಅವಳ ಹೆತ್ತವರು ಗಂಡನ ಮನೆಗೆ ಕರೆದುಕೊಂಡು ಹೋದರು.



9



10 ನರಸಿಂಹ ಮೆಹತಾನಿಗೆ ಸಮಾಧಾನವಾಯಿತು. ಆಗ ರಾಣಿ ಅವನ ಬಳಿಗೆ ಬಂದಳು..




11 ನರಸಿಂಹ ಮೆಹತಾ ರಾಣಿ ನೀಡಿದ ಪಟ್ಟಿಯನ್ನು ಶ್ರೀಕೃಷ್ಣನ ಮುಂದಿಟ್ಟು ಪ್ರಾರ್ಥಿಸಿದ. ಆಗ ಭಗವಂತನ ಮಹಿಮೆಯನ್ನು ಸ್ತುತಿಸುವ ಭಜನೆಯ ಗುಂಪೊಂದು ಅಲ್ಲೇ ಸಾಗಿ ಬಂತು.

12



13

ನರಸಿಂಹ ಮೆಹತಾ ಒಂದು ತಾಳೆಯ ಗರಿಯ ಮೇಲೆ ಅವರಿಗೆ ಒಂದು ಪರಿಚಯ ಪತ್ರ ಬರೆದುಕೊಟ್ಟ. ಭಕ್ತರು ತಮ್ಮ ಹಣವನ್ನೆಲ್ಲ ಅವನಿಗೊಪ್ಪಿಸಿ, ಅಲ್ಲಿಂದ ಹೊರಟರು. ನರಸಿಂಹ ಮೆಹತಾ ರಾಣಿ ಬಯಸಿದ್ದ ಉಡುಗೊರೆ ವಸ್ತುಗಳನ್ನೆಲ್ಲ ಆ ಹಣದಿಂದ ಖರೀದಿಸಿ, ಅವಳಿಗೆ ತಲುಪಿಸಿದ.

14




15

ದ್ವಾರಕೆಯಲ್ಲಿ ಭಕ್ತರಿಗೆ ಶ್ಯಾಮಲ ಶಹಾ ಎಲ್ಲೆಲ್ಲಿ ಹುಡುಕಿದರೂ ಕಾಣಸಿಗಲಿಲ್ಲ. ಕೊನೆಗೆ ಅವರ ಬಳಿಗೊಬ್ಬ ವ್ಯಕ್ತಿ ಬಂದ. ಅವನೇ ಶ್ಯಾಮಲ ಶಹಾ.




16

ನರಸೀ ಮೆಹತಾ ಆ ತಾಳೆಯ ಗರಿಯ ಮೇಲೆ, 'ಭಗವಾನ್! ನೀನೇ ನನಗೆ ಆಶ್ರಯ' ಎಂದು ಬರೆದಿದ್ದ. ಆದರೆ ಅವನು, 'ನಾಲ್ಕು ತಿಂಗಳ ತನಕ ಭಕ್ತರ ಗತಿಯೇನು?' ಎಂದೇ ಸದಾ ಚಿಂತಿಸುತ್ತಿದ್ದ. ಭಕ್ತರ ಹಣವನ್ನು ಹೇಗೆ ಹಿಂದಿರುಗಿಸಬೇಕೋ ಅವನಿಗೆ ತಿಳಿಯಲಿಲ್ಲ. ಒಂದು ದಿನ ಆ ಭಕ್ತರೆಲ್ಲ ಕೀರ್ತನೆ ಮಾಡುತ್ತಾ ಅಲ್ಲಿಗೆ ಬಂದರು.





## ರಾಮಕೃಷ್ಣ ಮಿಷನ್ ಆಶ್ರಮ

(ರಾಮಕೃಷ್ಣ ಮಿಷನ್, ಬೇಲೂರು ಮಠದ ಒಂದು ಶಾಖಾಕೇಂದ್ರ)
**ಸೆಕ್ಟರ್ 15-ಬಿ, ಮಧ್ಯ ಮಾರ್ಗ**
**ಚಂಡೀಗಢ -160 015**
ಫೋನ್: 0172 – 2549477
E-mail: rkmachandigarh@gmail.com
Website: www.rkmachandigarh.org



ನಿರ್ಮಿಸಲು ಉದ್ದೇಶಿಸಿರುವ **'ವಿಶ್ವಭಾವೈಕ್ಯ ಧ್ಯಾನಮಂದಿರ'** ಹಾಗೂ **ಶೈಕ್ಷಣಿಕ, ಸಾಂಸ್ಕೃತಿಕ ಕೇಂದ್ರ**

# ಒಂದು ವಿನಮ್ರ ವಿನಂತಿ

## ನೂತನ 'ವಿಶ್ವಭಾವೈಕ್ಯ ಧ್ಯಾನಮಂದಿರ' ಹಾಗೂ ಶೈಕ್ಷಣಿಕ, ಸಾಂಸ್ಕೃತಿಕ ಕೇಂದ್ರದ ನಿರ್ಮಾಣ

ಆತ್ಮೀಯ ಭಕ್ತಬಾಂಧವರೇ ಹಾಗೂ ಹಿತೈಷಿಗಳೆ,

ಚಂಡೀಗಢ ರಾಮಕೃಷ್ಣ ಮಿಷನ್ ಆಶ್ರಮವು 1955ರಲ್ಲಿ ಸ್ಥಾಪಿತವಾಯಿತು. ಅಂದಿನಿಂದ ಚಂಡೀಗಢ ಆಶ್ರಮವು ಶಾಂತಿಯನ್ನರಸಿ ಬರುವವರಿಗೆ ಆಧ್ಯಾತ್ಮಿಕ ಪರಿಹಾರ, ನೆಮ್ಮದಿಯನ್ನು ನೀಡುತ್ತಾ ಬಂದಿದೆ; ಅದಲ್ಲದೆ ಉಚಿತ ವೈದ್ಯಕೀಯ ಸೇವೆ, ಕಾಲೇಜು ವಿದ್ಯಾರ್ಥಿಗಳಿಗಾಗಿ 'ವಿವೇಕಾನಂದ ಸ್ಟೂಡೆಂಟ್ಸ್ ಹೋಮ್' ಎಂಬ ವಿದ್ಯಾರ್ಥಿ ನಿಲಯ, ಶಾಲೆ-ಕಾಲೇಜುಗಳಿಗೆ ಮೌಲ್ಯಶಿಕ್ಷಣ ಕಾರ್ಯಕ್ರಮಗಳು, ಪ್ರೇರಣಾತ್ಮಕ ಹಾಗೂ ಉನ್ನತ ಮೌಲ್ಯಗಳನ್ನು ಹರಡುವ ಸಾಹಿತ್ಯದ ಪ್ರಸರಣ – ಇವೇ ಮೊದಲಾದ ಚಟುವಟಿಕೆಗಳನ್ನು ನಡೆಸುತ್ತಿದೆ.

ಕಳೆದ ಎರಡು ದಶಕಗಳಿಂದ ಈ ಸೇವಾಕಾರ್ಯಗಳು ಸುಸ್ಥಿರವಾಗಿ ವ್ಯಾಪಕಗೊಳ್ಳುತ್ತಿವೆ. ಆಶ್ರಮಕ್ಕೆ ಆಗಮಿಸುವ, ಇಲ್ಲಿನ ದೈನಂದಿನ ಚಟುವಟಿಕೆಗಳಾದ ಬೆಳಗಿನ ಮಂಗಳಾರತಿ, ಸಂಧ್ಯಾರತಿಗಳಲ್ಲಿ ಪಾಲ್ಗೊಳ್ಳುವ ಹಾಗೂ ಇಲ್ಲಿ ನಡೆಯುವ ಧ್ಯಾನ, ತರಬೇತಿ ಶಿಬಿರ, ಸತ್ಸಂಗ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಭಕ್ತರ ಸಂಖ್ಯೆ ಗಣನೀಯವಾಗಿ ವೃದ್ಧಿಗೊಂಡಿದೆ.

ಹೊಸ ಅಗತ್ಯಗಳಿಗೆ ಅನುಗುಣವಾಗಿ ಆಶ್ರಮದಲ್ಲಿ ಈ ಕೆಳಗಿನ ಹೊಸ ಕಟ್ಟಡಗಳ ನಿರ್ಮಾಣ ಮಾಡಲು ನಿರ್ಧರಿಸಲಾಗಿದೆ:

| | | |
|---|---|---|
| 1) ವಿಶಾಲವಾದ ಧ್ಯಾನಮಂದಿರ ಹಾಗೂ ಸಾಧುನಿವಾಸ | – | 1.3 ಕೋಟಿ ರೂಪಾಯಿ ಅಂದಾಜು ವೆಚ್ಚ |
| 2) ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕೇಂದ್ರ | – | 2.1 ಕೋಟಿ ರೂಪಾಯಿ ಅಂದಾಜು ವೆಚ್ಚ |
| **ಈ ಯೋಜನೆಗೆ ತಗಲಬಹುದಾದ ಒಟ್ಟು ಮೊತ್ತ** | **–** | **3.4 ಕೋಟಿ ರೂಪಾಯಿ ಅಂದಾಜು ವೆಚ್ಚ** |



ರಾಮಕೃಷ್ಣ ಮಹಾಸಂಘದ 11ನೇ ಪರಮಾಧ್ಯಕ್ಷರಾಗಿದ್ದ ಶ್ರೀಮತ್ ಸ್ವಾಮಿ ಗಂಭೀರಾನಂದಜಿ ಮಹಾರಾಜ್ ಅವರು 1985ರ ನವಂಬರ್ 24ರಂದು 'ವಿಶ್ವಭಾವೈಕ್ಯ ಧ್ಯಾನಮಂದಿರ'ದ ಶಿಲಾನ್ಯಾಸ ಕಾರ್ಯಕ್ರಮ ನೆರವೇರಿಸುತ್ತಿರುವುದು.



ನೂತನ 'ವಿಶ್ವಭಾವೈಕ್ಯ ಧ್ಯಾನಮಂದಿರ' ಹಾಗೂ ಶೈಕ್ಷಣಿಕ, ಸಾಂಸ್ಕೃತಿಕ ಕೇಂದ್ರದ ನಿರ್ಮಾಣಕಾರ್ಯ ಪ್ರಗತಿಯಲ್ಲಿರುವುದು.

ಈ ಕಾರ್ಯಕ್ಕೆ ದೇಣಿಗೆ ನೀಡಬಯಸುವವರು ಚೆಕ್, ಡಿಡಿ ಇವುಗಳನ್ನು **'RAMAKRISHNA MISSION ASHRAMA, CHANDIGARH'** ಹೆಸರಿನಲ್ಲಿ ತೆಗೆದು, ಆಶ್ರಮದ ವಿಳಾಸಕ್ಕೆ ಕೊರಿಯರ್, ತ್ವರಿತ ಅಂಚೆ (speed post) ಅಥವಾ ರಿಜಿಸ್ಟರ್ಡ್ ಅಂಚೆ ಮೂಲಕ ಕಳುಹಿಸಬಹುದು. ನೇರವಾಗಿ ಬ್ಯಾಂಕಿಗೆ ಹಣ ವರ್ಗಾವಣೆ ಮಾಡುವವರಿಗೆ ಖಾತೆ ವಿವರಗಳು:

**1. ICICI A/c No. - 001301029198, Branch - Sector 15-C, Chandigarh, IFSC - ICIC0002429**
**2. IDBI A/c No. - 003104000083216, Branch - Sector 8-C, Chandigarh, IFSC - IBKL0000003**

(ದಯವಿಟ್ಟು ಹಣ ವರ್ಗಾವಣೆ ಮಾಡಿದ ವಿವರ, ನಿಮ್ಮ ವಿಳಾಸ, ಫೋನ್ ನಂ. ಇವುಗಳನ್ನು ಅದೇ ದಿನದಂದು ಇ-ಮೇಲ್ ಮೂಲಕ ನಮಗೆ ತಿಳಿಸಬೇಕಾಗಿ ವಿನಂತಿ)

*ಆಶ್ರಮದ ವಿಳಾಸ:*
**Ramakrishna Mission Ashrama, Sector 15-B, Madhya Marg, Chandigarh - 160015**
Tel: 0172-2549477 E-mail: rkmachandigarh@gmail.com

ಭಗವಾನ್ ಶ್ರೀರಾಮಕೃಷ್ಣರ ಸೇವೆಯಲ್ಲಿ
ಸ್ವಾಮಿ ಸತ್ಯೇಶಾನಂದ
ಕಾರ್ಯದರ್ಶಿಗಳು, ರಾಮಕೃಷ್ಣ ಮಿಷನ್ ಆಶ್ರಮ, ಚಂಡೀಗಢ

# ಗುರಪ್ ರಾಮಕೃಷ್ಣ ಮಿಷನ್ ಆಶ್ರಮ ಆರಂಭ






ಪಶ್ಚಿಮ ಬಂಗಾಳದ ಹುಗ್ಲಿ ಜಿಲ್ಲೆಯಲ್ಲಿರುವ ಗುರಪ್ ಎಂಬಲ್ಲಿ ರಾಮಕೃಷ್ಣ ಮಠ ಮತ್ತು ಮಿಷನ್ನಿನ ಶಾಖಾ ಕೇಂದ್ರವು ಆರಂಭವಾಯಿತು. ಈ ಹಿಂದೆ 'ಶ್ರೀರಾಮಕೃಷ್ಣ ಸೇವಾಶ್ರಮ' ಎಂಬ ಹೆಸರಿನಲ್ಲಿ ನಡೆಯುತ್ತಿದ್ದ ಖಾಸಗಿ ಕೇಂದ್ರವನ್ನು ಬಹುಜನರ ಬೇಡಿಕೆಯ ಮೇರೆಗೆ ರಾಮಕೃಷ್ಣ ಮಿಷನ್ನಿನ ಶಾಖಾ ಕೇಂದ್ರವನ್ನಾಗಿ ಸ್ವೀಕರಿಸಲು ಬೇಲೂರು ಮಠ (ರಾಮಕೃಷ್ಣ ಮಹಾಸಂಘದ ಪ್ರಧಾನ ಕೇಂದ್ರ) ನಿರ್ಧರಿಸಿತು. ಸ್ವಾಮಿ ಆನಂದಮಯಾನಂದಜಿ ಮಹಾರಾಜ್ ಅವರು ಈ ಕೇಂದ್ರದ ಕಾರ್ಯದರ್ಶಿಯಾಗಿ ನೇಮಕಗೊಂಡಿದ್ದು, ಈಗಾಗಲೇ ಆಶ್ರಮದ ಚಟುವಟಿಕೆಗಳು ಆರಂಭವಾಗಿವೆ. ಬಡ ಕುಟುಂಬಗಳಿಗಾಗಿ ಉಚಿತ ಪ್ರಾಥಮಿಕ ಶಿಕ್ಷಣ, ಕಂಪ್ಯೂಟರ್ ತರಬೇತಿ ಕೇಂದ್ರ , ನೈತಿಕ ಹಾಗೂ ಮೌಲ್ಯಶಿಕ್ಷಣ ಅರಿವಿನ ಕಾರ್ಯಕ್ರಮಗಳು, ಉಚಿತ ವೈದ್ಯಕೀಯ ತಪಾಸಣೆ, ಬಡಜನತೆಗೆ ಬಟ್ಟೆಬರೆ ಹಾಗೂ ಇತರ ಅಗತ್ಯ ವಸ್ತುಗಳ ವಿತರಣೆ, ಚಳಿಗಾಲದಲ್ಲಿ ಕಂಬಳಿ ವಸ್ತ್ರ ವಿತರಣೆ, ಸಂತ್ರಸ್ತ ಜನರ ಪುನರ್ವಸತಿ ಕಾರ್ಯಕ್ರಮ ಹಾಗೂ ನೈಸರ್ಗಿಕ ವಿಪತ್ತುಗಳು ಎದುರಾದಾಗ ಪರಿಹಾರ ಕಾರ್ಯ, ಇನ್ನೂ ಮೊದಲಾದ ಚಟುಟಿಕೆಗಳನ್ನು ಆರಂಭಿಸಲು ಉದ್ದೇಶಿಸಲಾಗಿದೆ. 2016ರ ಫೆಬ್ರವರಿ 2ರಂದು ನಡೆದ ಕಾರ್ಯಕ್ರಮದಲ್ಲಿ ಆಶ್ರಮವನ್ನು ಅಧಿಕೃತವಾಗಿ ಮಿಷನ್ನಿಗೆ ಹಸ್ತಾಂತರಿಸಲಾಯಿತು. ರಾಮಕೃಷ್ಣ ಮಹಾಸಂಘದ ಪ್ರಧಾನ ಕಾರ್ಯದರ್ಶಿಗಳಾದ ಸ್ವಾಮಿ ಸುಹಿತಾನಂದಜಿ ಮಹಾರಾಜ್ ಹಾಗೂ ಸಹ ಕಾರ್ಯದರ್ಶಿಗಳಾದ ಸ್ವಾಮಿ ಸುವೀರಾನಂದಜಿ ಮಹಾರಾಜ್ ಅವರು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

## ಮೈಸೂರಿನಲ್ಲಿ 'ಸಂತ್ರಸ್ತ ಪರಿಹಾರ ಕಾರ್ಯ'

ರಾಮಕೃಷ್ಣ ಮಹಾಸಂಘದ ಪ್ರಧಾನ ಕೇಂದ್ರವಾದ ಬೇಲೂರು ಮಠದ 'ಪರಿಹಾರ ಕಾರ್ಯವಿಭಾಗ'ದ ವತಿಯಿಂದ ನಡೆಸಲಾದ 'ಸಂತ್ರಸ್ತ ಪರಿಹಾರ ಕಾರ್ಯ'ವು ಮೈಸೂರು ಶ್ರೀರಾಮಕೃಷ್ಣ ಆಶ್ರಮದ ನೇತೃತ್ವದಲ್ಲಿ ಮೈಸೂರು ಹಾಗೂ ಸುತ್ತಮುತ್ತಲಿನ ವಿವಿಧ ಪ್ರದೇಶಗಳಲ್ಲಿ ನಡೆಯಿತು. ಮೈಸೂರು ನಗರದ ಹಿಂದುಳಿದ ಪ್ರದೇಶಗಳಲ್ಲಿ ವಾಸಿಸುತ್ತಿರುವ ಬಡಕುಟುಂಬಗಳನ್ನು ಹಾಗೂ ಆರ್ಥಿಕವಾಗಿ ಹಿಂದುಳಿದ ಜನರನ್ನು ಗುರುತಿಸಿ, ಅವರಿಗೆ ವಸ್ತ್ರ ವಿತರಣೆ ಕಾರ್ಯವನ್ನು ಮಾಡಲಾಯಿತು. ಮೈಸೂರಿನ ಕುಂಬಾರಕೊಪ್ಪಲು, ಮಂಜುನಾಥಪುರ, ಸ್ವೀಪರ್ಸ್ ಕಾಲೋನಿ, ಗಾಯತ್ರಿಪುರಂ ಮೊದಲಾದೆಡೆ ಹಾಗೂ ಬಿಳಿಗಿರಿರಂಗನ ಬೆಟ್ಟ, ತೆಂಕಲಮೋಳೆ, ಕೆ.ಗುಡಿ, ಮೊದಲಾದ ಹಿಂದುಳಿದ ಪ್ರದೇಶಗಳಲ್ಲಿ ಒಟ್ಟು 2309 ಸ್ವೆಟರ್, 984 ಜಾಕೆಟ್, 1125 ಟಿ-ಶರ್ಟ್, 992 ಶರ್ಟ್, 1038 ಪ್ಯಾಂಟ್ ಇವುಗಳನ್ನು ವಿತರಿಸಲಾಯಿತು. ಒಟ್ಟು 2583 ಫಲಾನುಭವಿಗಳು ಇವುಗಳನ್ನು ಸ್ವೀಕರಿಸಿದರು. ಈ ಉತ್ತಮ ಗುಣಮಟ್ಟದ ಬಟ್ಟೆಬರೆಗಳನ್ನು ಐ.ಟಿ.ಸಿ. ಲಿಮಿಟೆಡ್ ಕಂಪೆನಿಯು ಪ್ರಾಯೋಜಿಸಿದ್ದು, ಬೇಲೂರು ಮಠದ ನಿರ್ದೇಶದನ್ವಯ ಇವುಗಳನ್ನು ವಿತರಿಸಲಾಯಿತು. ವಿವಿಧ ಪ್ರದೇಶಗಳಲ್ಲಿ ನಡದ ಸರಳ ಕಾರ್ಯಕ್ರಮದಲ್ಲಿ ಆಶ್ರಮದ ಸಂನ್ಯಾಸಿಗಳು, ಸ್ವಯಂಸೇವಕರು ಹಾಗೂ ಇತರರು ಪಾಲ್ಗೊಂಡಿದ್ದರು. ಫೆಬ್ರವರಿ 16 ರಿಂದ ಮಾರ್ಚ್ 7 ರ ತನಕ ಈ ಕಾರ್ಯಕ್ರಮಗಳು ನಡೆದವು.












# 'ಸ್ವಚ್ಛ ಮಂಗಳೂರು ಅಭಿಯಾನ'ದ ಪ್ರಥಮ ಹಂತದ ಸಮಾರೋಪ

ಮಂಗಳೂರು ರಾಮಕೃಷ್ಣ ಮಿಷನ್ನಿನ ವತಿಯಿಂದ ಕೇಂದ್ರ ಸರ್ಕಾರದ ವಿಶೇಷ ಕೋರಿಕೆಯ ಮೇರೆಗೆ ಕಳೆದ ಒಂದು ವರ್ಷದಿಂದ ನಡೆದು ಬಂದ **'ಸ್ವಚ್ಛ ಭಾರತಕ್ಕಾಗಿ ಸ್ವಚ್ಛ ಮಂಗಳೂರು'** ಕಾರ್ಯಕ್ರಮದ ಮೊದಲ ಹಂತದ 40 ವಾರಗಳ ಯಶಸ್ವೀ ಅಭಿಯಾನ ಇದೇ ಫೆಬ್ರುವರಿ 14ನೇ ತಾರೀಕಿನಂದು ಸಂಪನ್ನಗೊಂಡಿತು. ಈ 40 ವಾರಗಳ ಅಭಿಯಾನದಲ್ಲಿ ಮಂಗಳೂರಿನ ವಿವಿಧ ಸ್ಥಳಗಳಲ್ಲಿ ಸುಮಾರು 15,000ಕ್ಕೂ ಹೆಚ್ಚು ಸ್ವಯಂಸೇವಕರು, ವಿದ್ಯಾರ್ಥಿಗಳು, ಭಕ್ತರು ಹಾಗೂ ಹಿತೈಷಿವರ್ಗವು ಐವತ್ತಕ್ಕೂ ಹೆಚ್ಚು ಸಂಘ-ಸಂಸ್ಥೆಗಳ ಮೂಲಕ ಸಕ್ರಿಯವಾಗಿ ಪಾಲ್ಗೊಂಡಿದ್ದರು. ಇದೇ ಫೆಬ್ರವರಿ 14 ರಂದು ನಡೆದ 'ಧನ್ಯವಾದ ಸಮರ್ಪಣಾ ಸಮಾರಂಭ'ವನ್ನು ಉದ್ಘಾಟಿಸಿದ ಕೇಂದ್ರ ಸರ್ಕಾರದ ಮಾನ್ಯ ನಗರಾಭಿವೃದ್ಧಿ ಸಚಿವರಾದ ಶ್ರೀ ವೆಂಕಯ್ಯ ನಾಯ್ಡು ಅವರು, ಕೇಂದ್ರ ಸರ್ಕಾರದ ಸ್ವಚ್ಛತಾ ಅಭಿಯಾನದ ಕರೆಗೆ ಓಗೊಟ್ಟು ಯಶಸ್ವಿಯಾಗಿ, ಸತತವಾಗಿ ಅಭಿಯಾನವನ್ನು ಕೈಗೊಂಡ ಮಂಗಳೂರು ರಾಮಕೃಷ್ಣ ಮಿಷನ್ನಿನ ಕಾರ್ಯವನ್ನು ಶ್ಲಾಘಿಸಿದರು ಮತ್ತು ಎಲ್ಲ ಸಂಘಸಂಸ್ಥೆಗಳಿಗೆ, ಸಾರ್ವಜನಿಕರಿಗೆ ಈ ಕಾರ್ಯ ಒಂದು ಆದರ್ಶ ಎಂದು ಬಣ್ಣಿಸಿದರು.

# ಸೋದರಿ ನಿವೇದಿತಾ ೧೫೦ನೇ ಜನ್ಮ ಶತಾಬ್ಧಿಯ ಅಂಗವಾಗಿ ಮಹಳಾ ಸಬಲೀಕರಣ ಕುರಿತು ವಿಚಾರ ಸಂಕಿರಣ : 'ಶಕ್ತಿ'

ಸೋದರಿ ನಿವೇದಿತಾ ಅವರ ೧೫೦ನೇ ಜನ್ಮ ಶತಾಬ್ದಿಯ ಅಂಗವಾಗಿ ಮಂಗಳೂರು ರಾಮಕೃಷ್ಣ ಮಠದಲ್ಲಿ ಫೆಬ್ರವರಿ ೧೫ ರಂದು ಒಂದು ದಿನದ ವಿಚಾರ ಸಂಕಿರಣವನ್ನು ಏರ್ಪಡಿಸಲಾಗಿತ್ತು. **'ಶಕ್ತಿ'** ಎಂಬ ಶೀರ್ಷಿಕೆಯಡಿಯಲ್ಲಿ ಆಯೋಜಿಸಲಾದ ಈ ಸಂಕಿರಣದ ಉದ್ಘಾಟನೆಯನ್ನು ವಿಧಾನ ಪರಿಷತ್ತಿನ ಸದಸ್ಯರಾದ ಕ್ಯಾಪ್ಟನ್ ಗಣೇಶ ಕಾರ್ಣಿಕ್ ಅವರು ನೆರವೇರಿಸಿದರು. ಅನಂತರ 'ನಿವೇದಿತಾ ಮತ್ತು ಮಹಿಳಾ ಸಬಲೀಕರಣ' ಎಂಬ ವಿಷಯವನ್ನು ಕುರಿತು ಪುಣೆ ಶ್ರೀರಾಮಕೃಷ್ಣ ಮಠದ ಅಧ್ಯಕ್ಷರಾದ ಸ್ವಾಮಿ ಶ್ರೀಕಾಂತಾನಂದಜಿ ಮಹಾರಾಜ್, ಚಳ್ಳಕೆರೆ ಶ್ರೀಶಾರದಾಶ್ರಮದ ಅಧ್ಯಕ್ಷರಾದ ಮಾತಾ ತ್ಯಾಗಮಯೀ ಹಾಗೂ ಬೆಂಗಳೂರು 'ಮಾನಸ ತರಬೇತಿ ಕೇಂದ್ರ,'ದ ನಿರ್ದೇಶಕರಾದ ಪ್ರೊ.ರಘೋತ್ತಮ ರಾವ್ ಅವರು ವಿಚಾರಗೋಷ್ಠಿಗಳನ್ನು ನಡೆಸಿಕೊಟ್ಟರು. ಮಂಗಳೂರಿನ ವಿವಿಧ ಕಾಲೇಜುಗಳಿಂದ ಆಗಮಿಸಿದ ಸುಮಾರು ೬೫೦ ವಿದ್ಯಾರ್ಥಿನಿಯರು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.



Managing Editor : Swami Muktidananda
Editor : Swami Jnanayogananda
Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# KAILASH MANASA SAROVAR YATRA




**11 DAYS by Flight / Helicopter**

**Depr. : May 17, 31 June 04**
**Aug 30 Sep 06**



## Shri Hansaa Travels

**Recognised by Department of Tourism, Govt. of Karnataka**

: 640, 40th Cross, 8th Block, Jayanagar, Bangalore - 70

: hansaatravels@gmail.com : hansaatravels.com

080-26643276 / 26543891 / 9341215612 / 9341415612

